॥ ಸಿರಿಗನ್ನಡಂಗೆಲ್ಗೆ ॥

ಶ್ರೀ ಕಲ್ಯಾಣಕೀರ್ತಿ–ಕೃತ

# ಚಿನ್ಮಯ ಚಿಂತಾಮಣಿ

ಸಂಪಾದಕರು :

ಶ್ರೀ. ಮಿರ್ಜಿ ಅಣ್ಣಾರಾಯರು

ಶಾಂತಿ ಸೇವಾ ಸದನ, ಸೇಡಬಾಳ

ಹಳಗನ್ನಡ ಕಾವ್ಯಮಾಲಾ: ೧

ಶ್ರೀ ಕಲ್ಯಾಣಕೀರ್ತಿ ಕೃತ

# ಚಿನ್ಮಯ ಚಿಂತಾಮಣಿ



ಸಂಪಾದಕರು:

ಶ್ರೀ. ಮಿರ್ಜಿ ಅಣ್ಣಾರಾಯರು



ಶಾಂತಿ ಸೇವಾ ಸದನ, ಸೇಡಬಾಳ

೧೯೪೬ ಬೆಲೆ ೧-೦-೦

# ಹಳಗನ್ನಡ ಕಾವ್ಯಮಾಲೆ, ಸೇಡಬಾಳ



ಸಂಪಾದಕರು:
ಟಿ. ಕೆ. ಪಾಟೀಲ ಬಿ. ಎ., ಬಿ. ಟಿ.

**ಸಲಹೆಗಾರ ಮಂಡಳ**

ಡಾ. ಎ. ಎನ್. ಉಪಾಧ್ಯೆ, ಎಮ್. ಎ., ಡಿ. ಲಿಟ್.
ಪ್ರೊ. ರಂ. ಶ್ರೀ. ಮುಗಳಿ ಎಮ್. ಎ., ಬಿ. ಟಿ.
ಪ್ರೊ. ಎಸ್. ಎಸ್. ಮಾಳವಾಡ ಎಮ್. ಎ.
ಶ್ರೀ. ಎ. ಶಾಂತಿರಾಜ, ಶಾಸ್ತ್ರಿ ಆಸ್ಥಾನ ವಿದ್ವಾನ್, ಪಂಡಿತರತ್ನಂ
ಕವಿಭೂಷಣ ಬೆಟಗೇರಿ ಕೃಷ್ಣಶರ್ಮ
ಶ್ರೀ. ಕೆ. ಎಫ್. ಪಾಟೀಲ ಬಿ. ಎ.
ಶ್ರೀ ಜಿನರಾಜ ಹೆಗಡೆ, ಬಿ. ಎಸ್‌ಸಿ., ಎಲ್‌ಎಲ್. ಬಿ.
ಶ್ರೀ. ಟಿ. ಕೆ. ತುಕ್ಕೋಳ, ಎಮ್. ಎ., ಎಲ್‌ಎಲ್. ಬಿ.



---

ಮುದ್ರಕರು:— ಎನ್. ಎಸ್. ಬೆಂಗೇರಿ
ವಿಜಯ ಮುದ್ರಾಲಯ, ಧಾರವಾಡ.

ಪ್ರಕಾಶಕರು:— ಜಿ. ಬಿ. ಜೋಶಿ
ಸಂಪಾದಕರು, ಮನೋಹರ ಗ್ರಂಥಮಾಲಾ, ಧಾರವಾಡ.
(ಶಾಂತಿ ಸೇವಾಸದನದ ಪರವಾಗಿ)

# ಅರಿಕೆ

ನಮ್ಮ ಕನ್ನಡ ನಾಡಿನ ಸಾಂಸ್ಕೃತಿಕ ಸಂಪತ್ತು ಹಳಗನ್ನಡ ಕಾವ್ಯಗಳಲ್ಲಿ ಇದೆ. ಹಿಂದಿನ ಸಾಹಿತ್ಯಾಭ್ಯಾಸದ ಬಲದಿಂದ ಇಂದಿನ ಕನ್ನಡ ಸಾಹಿತ್ಯವು ಮುಂದೆ ಹೆಜ್ಜೆಯನ್ನಿಡಬೇಕಾಗಿದೆ. ಅಖಂಡ ಕನ್ನಡ ನಾಡಿನ ಬೇಡಿಕೆಗಳನ್ನು ಪೂರಯಿಸಲು ಸಮರ್ಥವಾಗಿ ನಿಲ್ಲಬೇಕಾಗಿದೆ.

ಇದಕ್ಕಾಗಿ ' ಹಳಗನ್ನಡ ಕಾವ್ಯಮಾಲೆ 'ಯೊಂದು ಅತ್ಯವಶ್ಯಕವಾಗಿದೆ ಎಂದು ಗೆಳೆಯರೆಲ್ಲರೂ ಬಹುದಿನಗಳಿಂದ ಹಂಬಲಿಸುತ್ತಿದ್ದೆವು. ಸೇಡಬಾಳದ ಶ್ರಾವಕ ಬಂಧುಗಳು ಇಂಥ ಸಂಧಿಯನ್ನು ಒದಗಿಸಿಕೊಟ್ಟು ನಮ್ಮ ಗೆಳೆಯರ ಮೇಲೆ—ಅದೇಕೆ ?—ಇಡೀ ಕನ್ನಡ ನಾಡಿನ ಮೇಲೆಯೇ ಉಪಕಾರ ಮಾಡಿದ್ದಾರೆ.

ಸೇಡಬಾಳದಲ್ಲಿ ಮೊದಲಿನಿಂದಲೂ ನಡೆದು ಬಂದ ' ಶಾಂತಿ ಸಾಗರ ವಾಚನಾಲಯ 'ವೊಂದಿದೆ. ಅಲ್ಲಿಯ ಉತ್ಸಾಹಿ ಗೆಳೆಯರು ಇದನ್ನು ಒಳ್ಳೆಯ ರೀತಿಯಿಂದ ನಡೆಯಿಸುತ್ತಿರುವರಲ್ಲದೆ ' ಬೆಳಗು ' ಎಂಬ ಕೈಬರಹದ ತ್ರೈಮಾಸಿಕವನ್ನೂ ಕೆಲಕಾಲ ಹೊರಡಿಸುತ್ತಿದ್ದರು. ಅಲ್ಲದೆ ಗಡಿನಾಡಿನಲ್ಲಿ ಕನ್ನಡದ ಜಾಗೃತಿಯಾಗಲೆಂದು ಆಗಾಗ ಶ್ರೀಯುತರುಗಳಾದ ಕೆ. ಡಿ. ಸಂಗೋರಾಮ, ಆರ್. ಬಿ. ಜಾಧವ, ಈಶ್ವರ ಸಣಕಲ್ಲ ಮೊದಲಾದವರ ಉಪನ್ಯಾಸಗಳನ್ನೂ ಇಡುತ್ತ ಬಂದಿದ್ದಾರೆ. ಹಾಗೆಯೇ ವಾಚನಾಲಯದ ಅಂಗವಾಗಿ ' ಶಾಂತಿ ಸೇವಾಸದನ 'ವೆಂಬ ಅಭ್ಯಾಸಕೂಟವೊಂದನ್ನು ಕಟ್ಟಿ, ಅದರ ಮುಖಾಂತರ ಹಲವು ಬರಹಗಳನ್ನು ಬರೆದು ಈ ಮೊದಲು ಕನ್ನಡ ನಾಡಿನ ವಿವಿಧ ಪತ್ರಿಕೆಗಳಲ್ಲಿ ಪ್ರಕಟಿಸುತ್ತ ಬಂದರು. ಈಗ ಆ ಗೆಳೆಯರ ಅಭ್ಯಾಸವು ಈ ' ಹಳಗನ್ನಡ ಕಾವ್ಯಮಾಲೆ 'ಯಲ್ಲಿ ಗುಡಿಗಟ್ಟಿ ನಿಂತಿದೆ.

ಕಾವ್ಯಮಾಲೆಯು ಕಾರ್ಯ ಮಾಡಬೇಕೆಂದಿಟ್ಟುಕೊಂಡ ಕ್ಷೇತ್ರವು ಬಹು ವಿಶಾಲವಾದುದು. ಪಂಪ, ರನ್ನ, ಲಕ್ಷ್ಮೀಶ, ಷಡಕ್ಷರಿ, ರತ್ನಾಕರರಂಥ ಮಹಾಕವಿಗಳ ಕಾವ್ಯಗಳನ್ನೂ, ಬಸವಣ್ಣ, ಚನ್ನಬಸವಣ್ಣನವರಂಥ ಯುಗ ಪ್ರವರ್ತಕರ ವಾಣಿಯನ್ನೂ, ಚಾಮುಂಡರಾಯ, ಕೃಷ್ಣದೇವರಾಯರೇ ಮೊದಲಾದ ಧೀರೋದಾತ್ತರ ಚರಿತ್ರ ಗ್ರಂಥಗಳನ್ನೂ ಸಂಪಾದಿಸಿ, ಬರೆಯಿಸಿ

ಪ್ರಕಟಿಸಬೇಕೆಂದಿಟ್ಟುಕೊಂಡಿದೆ. ಹಾಗೆಯೇ ಕಂತಿ, ವಿಜಯಾದೇವಿ, ಅಕ್ಕ ಮಹಾದೇವಿ, ಜಕ್ಕಿಯಬ್ಬೆಯರಂತಹ ಮಹಿಳೆಯರ ಪರಿಚಯವನ್ನೂ ಜನತೆಗೆ ಮಾಡಿಕೊಡಬೇಕಾಗಿದೆ. ಅಲ್ಲದೆ ಕನ್ನಡ ರಾಜ್ಯ ಸಾಮ್ರಾಜ್ಯಗಳನ್ನು ಕಟ್ಟಲು ಸಿಂಹನಂದಿ, ಸುದತ್ತ, ವಿದ್ಯಾರಣ್ಯರಂಥ ಮಹಾ ಮುನಿಗಳೂ ತ್ಯಾಗಿಗಳೂ ತಮ್ಮ ತಪಸ್ಸಿನ ಬಲವನ್ನು ನೀಡಿ ಕನ್ನಡಿಗರನ್ನು ಇಲ್ಲಿಯ ವರೆಗೆ ಹೇಗೆ ಉಳಿಸಿದರು, ಬಾಳಿಸಿದರು; ಬೆಳಗೊಳ, ಕಲ್ಯಾಣ, ಹಂಪಿ, ಹೊಂಬುಜ ಗಳಂತಹ ಸ್ಥಳಗಳು ಕನ್ನಡಿಗರ ಪವಿತ್ರ ಕಾರ್ಯಕ್ಷೇತ್ರಗಳಾಗಿ ನಾಡಿನ ಜನತೆ ಯಲ್ಲಿ ಹೇಗೆ ಕೆಚ್ಚನ್ನು ತುಂಬಿದುವು; ಇವೇ ಮೊದಲಾದ ವಿಚಾರಕಿರಣ ಗಳನ್ನು ಮನೆಮನೆಗೂ ಮುಟ್ಟಿಸಬೇಕು; ಕನ್ನಡಿಗರನ್ನು ಬೆಳಗಿಸಬೇಕು.

ಇದನ್ನು ಲಕ್ಷಿಸಿಯೇ ಅನೇಕ ಮುನಿಗಳೂ ಗುರುಗಳೂ ವಿದ್ವಾಂಸರೂ ಪಂಡಿತರೂ ದಾನಶೂರರೂ ಈ ಮಾಲೆಯನ್ನು ಹರಸಿದ್ದಾರೆ. ಅವರ ಹರಕೆಯೇ ನಮ್ಮ ಬಲ. ಇದಕ್ಕೆ ಕನ್ನಡ ನಾಡಿನ ಜನತೆಯು ಸಹಕರಿಸಿ ಪೋಷಣಮಾಡ ಬೇಕೆಂದು ಪ್ರಾರ್ಥಿಸುತ್ತೇವೆ.

ಕೇಳಿದ ಕ್ಷಣಕ್ಕೆ ಸಲಹೆಗಾರರಾಗಲಿಕ್ಕೆ ಒಪ್ಪಿ, ಆಶೀರ್ವದಿಸಿ, ಸೂಕ್ತ ಸಲಹೆಗಳನ್ನು ನೀಡಿ ನಮ್ಮನ್ನು ಪ್ರೋತ್ಸಾಹಿಸಿದ ಸಲಹೆಗಾರ ಮಂಡಳದಲ್ಲಿಯ ಎಲ್ಲ ಜನರಿಗೂ ನಾವು ಎಂದಿಗೂ ಋಣಿಯಾಗಿದ್ದೇವೆ.

ಶ್ರೀ. ಕಲ್ಯಾಣಕೀರ್ತಿ ವಿರಚಿತ 'ಚಿನ್ಮಯ ಚಿಂತಾಮಣಿ'ಯನ್ನು ತಮ್ಮ ಅಭ್ಯಾಸಪೂರ್ಣವಾದ ವಿಸ್ತೃತ ಭೂಮಿಕೆ ಭಾವಾರ್ಥಗಳೊಂದಿಗೆ ಸಂಪಾದಿಸಿ ಕೊಟ್ಟುದಕ್ಕಾಗಿ ಶ್ರೀ. ಮಿರ್ಜಿ ಅಣ್ಣಾರಾಯರಿಗೆ ನಾವು ಉಪಕೃತರು.

ಪ್ರಕಟನೆಯ ಭಾರಹೊತ್ತು, ಕಾವ್ಯಮಾಲೆಯ ಸ್ಥಾಪನೆಯ ಕಾಲ ದಲ್ಲಿಯೇ ಕೈಹಿಡಿದು ಬೆಳಕಿಗೆ ತಂದ ಧಾರವಾಡದ ಮನೋಹರ ಗ್ರಂಥ ಮಾಲೆಯ ಸಂಪಾದಕರಾದ ಶ್ರೀ. ಜಿ. ಬಿ. ಜೋಶಿಯವರಿಗೂ, ಸ್ವಲ್ಪಾವಕಾಶ ದಲ್ಲಿ ಮುದ್ರಿಸಿಕೊಟ್ಟ ವಿಜಯ ಮುದ್ರಾಲಯದ ಒಡೆಯರಾದ ಶ್ರೀ. ಹೊಸಕೇರಿಯವರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

೨೫–೧೦–೧೯೪೬ —ಸಂಪಾದಕರು

# ಅರ್ಪಣೆ

ಗುಜರಾಥ ಪ್ರಾಂತದಿಂದ ಇಲ್ಲಿಗೆ ಬಂದು, ಕನ್ನಡವನ್ನಭ್ಯಸಿಸಿ,
ಹಳಗನ್ನಡ ಕಾವ್ಯಮಾಲೆಯ ಪ್ರಕಾಶನಕ್ಕೆ
ಕಾರಣರಾದ

ಶ್ರೀ. ೧೦೮ ಮಹಾವೀರಕೀರ್ತಿ

ಮುನಿಗಳ

ಅ ಡಿ ದಾ ವ ರೆ ಗ ಳ ಲ್ಲಿ

# ಭೂಮಿಕೆ

**ಮಾತೃಕೆಗಳ ನೆರವು :**

ಈ ತತ್ವಶಾಸ್ತ್ರವನ್ನು ನಮಗೆ ಗೊತ್ತಿದ್ದ ಮಟ್ಟಗೆ ಹುಬ್ಬಳ್ಳಿಯ ಶ್ರೀಕೃಷ್ಣ ಪ್ರಿಂಟಿಂಗ ಪ್ರೆಸ್ಸಿನವರು ಕ್ರಿ. ಶ. ೧೯೦೯ ನೆಯ ವರ್ಷದಲ್ಲಿ ಮೊದಲ ನೆಯ ಸಲ ಮುದ್ರಣಗೊಳಿಸಿದರು. ಇಂದಿನ ಮುದ್ರಣದಲ್ಲಿ ಸಹಾಯ ಮಾಡಿದ 'ಬ' ಪ್ರತಿಯು ಇದೇ. ಇದನ್ನು ಶ್ರೀ ಆದಗೌಡ ಅಣ್ಣಾಗೌಡ ಪಾಟೀಲ, ಸೇಡಬಾಳ ಇವರು ನಮಗೆ ಒದಗಿಸಿಕೊಟ್ಟು ಉಪಕಾರಮಾಡಿದ್ದಾರೆ. ಇದು ಅಷ್ಟೊಂದು ಶುದ್ಧ ರೂಪದಲ್ಲಿ ಇಲ್ಲ.

ಅನಂತರ ಇದೇ ಗ್ರಂಥವನ್ನು ಕ್ರಿ. ಶ. ೧೯೩೦ ನೆಯ ವರ್ಷ ಕೊಲ್ಹಾಪುರದ ರಾಜಾರಾಮ ಕಾಲೇಜಿನ ಪ್ರೊಫೆಸರರಾದ ಶ್ರೀ. ಕೆ. ಜಿ. ಕುಂದಣಗಾರರೂ ಹಾಗೂ ಡಾ. ಎ. ಎನ್ ಉಪಾಧ್ಯೆಯವರೂ ಸಂಪಾದಿಸಿ, ಬೆಳಗಾಂವಿಯ 'ಶ್ರೀಜಿನವಿಜಯ' ಮಾಸಪತ್ರಿಕೆಯಲ್ಲಿ ೧೯೩೭ ನೆಯ ಇಸ್ವಿಯಲ್ಲಿ ಪ್ರಕಟಿಸಿದರು. ಇದನ್ನು ಸಕಾಲಕ್ಕೆ ಕಳಿಸಿಕೊಟ್ಟು, ಡಾ. ಉಪಾಧ್ಯೆಯವರು ನೆರವು ನೀಡಿದರು. ಇದು ನಮಗೆ ನೆರವಾದ 'ಕ' ಪ್ರತಿಯು.

ಈ ಎರಡೂ ಸಲದ ಪ್ರಕಾಶಕರು ತಮತಮಗೆ ದೊರೆತ ಒಂದೆರಡು ಹಸ್ತ ಪ್ರತಿಗಳ ಆಧಾರದಿಂದ—ಗ್ರಂಥ ನಷ್ಟವಾದೀತು ಅಚ್ಚಾಗಲಿ—ಎಂಬ ಭಾವನೆಯಿಂದ ಪ್ರಕಟಗೊಳಿಸಿದರು. ಇಬ್ಬರೂ ಇಟ್ಟುಕೊಂಡ ಮೂಲ ಮಾತೃಕೆಗಳು ಬೇರೆಬೇರೆಯೇ ಆಗಿರುವುದರಿಂದ ಎರಡರಲ್ಲಿಯೂ ಅನೇಕ ವ್ಯತ್ಯಾಸಗಳಿವೆ. ಇರುವುದು ಸಹಜ.

ಇತ್ತೀಚಿಗೆ ನಾನು ಉಗಾರ (ಬೆಳಗಾಂವಿ ಜಿಲ್ಹೆ)ದಲ್ಲಿ ಕೆಲವು ಹಳೆಯ ಗ್ರಂಥಗಳನ್ನು ಶೋಧಿಸುತ್ತಿರುವಾಗ ಅಲ್ಲಿಯ ಗೌಡರಾದ ಶ್ರೀ. ಪಾಸಗೌಡಾ ಅಪ್ಪಾಗೌಡಾ ಪಾಟೀಲ ಇವರಲ್ಲಿ ಒಂದು ಹೊತ್ತಿಗೆ ಸಿಕ್ಕಿತು. ಅದು 'ನಿತ್ಯ ಕ್ರಿಯೆ'ಗೆ ಆಖ್ಯಾನ ಬರೆದ ಗ್ರಂಥ. ಇದನ್ನು "ಉಗಾರಾಖ್ಯನಗರೆ ಪ್ರಭುರಾಯ

ಗೋಂಡಾಖ್ಯ ತತ್ ಭಾರ್ಯಾ ಅಕ್ಕಾಬಾಯಿ ದಶಲಕ್ಷಣ ವ್ರತ” ನೋಂತ ಸ್ಮೃತಿಗಾಗಿ ಶಕೆ ೧೬೮೦ (ಕ್ರಿ. ಶ. ೧೭೫೮)ರ ಭಾದ್ರಪದ ಮಾಸದ ಶುದ್ಧ ಪಂಚಮಿ—ಅಂದರೆ ದಶಲಕ್ಷಣ ಪರ್ವದ ಆರಂಭ ದಿನ-ಯಲ್ಲಿ ಬರೆಯಿಸಿದರು. ಇದು ಹಳೆಯ ಕಾಗದದ ಮೇಲೆ ಬರೆಯಲ್ಪಟ್ಟ ಸುಮಾರು ೫೫೫ ಪುಟಗಳ ದೊಡ್ಡ ಗ್ರಂಥ. ಇದನ್ನು ಸಹಜ ತಿರುವಿ ಹಾಕುವಾಗ ‘ಚಿನ್ಮಯ ಚಿಂತಾ ಮಣಿ’ಯ ಪದ್ಯಗಳು ದೃಷ್ಟಿಗೆ ಬಿದ್ದುವು. ಇದು ‘ಅ’ ಪ್ರತಿಯು

ಇನ್ನೊಂದು ಸೌ. ಸುಶೀಲಾದೇವಿ ತೇಜಗೌಡಾ ಪಾಟೀಲರು ಕಳುಹಿಸಿ ಕೊಟ್ಟ ಹಸ್ತಪ್ರತಿಯು. ಅದನ್ನವರು ದಿನದ ಸ್ವಾಧ್ಯಾಯಕ್ಕಾಗಿ ಶ್ರೀ. ೧೦೮ ಮಹಾವೀರಕೀರ್ತಿ ಮುನಿಗಳಿಂದ- ಕೇಳಿ ಬರೆದುಕೊಂಡುದು. ಇದಕ್ಕೇನೇ ನಾವು ‘ಡ’ ಪ್ರತಿಯೆಂದು ಕರೆದುದು.

ಹೀಗೆ ನಾಲ್ಕು ಪ್ರತಿಗಳ ನೆರವಿನಿಂದ ಈ ಮೂರನೆಯ ಮುದ್ರಣದ ಪ್ರತಿಯನ್ನು ಸಿದ್ಧಗೊಳಿಸಲಾಗಿದೆ. ಅಲ್ಲಲ್ಲಿ ಕಂಡು ಬಂದ ವ್ಯತ್ಯಾಸಗಳನ್ನು ಅಡಿ ಟಿಪ್ಪಣಿಯಲ್ಲಿ ಕಾಣಿಸಲಾಗಿದೆ. ಮೇಲಾಗಿ ಪದ್ಯಗಳ ಭಾವ ಪ್ರಕಾಶವನ್ನು ಸ್ವಲ್ಪದರಲ್ಲಿ ಬೀರಿದ್ದೇವೆ. ಗ್ರಂಥದ ಮಹತ್ವದ ಮೇಲೆ ದೃಷ್ಟಿಯಿಟ್ಟು ಪಾಠಕರು ಮನ್ನಿಸುವರೆಂದು ಕೋರುತ್ತೇವೆ.

**ಪ್ರಕಟನೆಯ ವಿಚಾರ:**

ನನಗೆ ದೊರೆತ ‘ಅ’ ಪ್ರತಿಯನ್ನು ಪ್ರಕಟಿಸಬೇಕೆಂದೆಣಿಸಿ ಸೇಡಬಾಳದ ನನ್ನ ತರುಣ ಗೆಳೆಯರೂ ವಿಶೇಷವಾಗಿ ಧರ್ಮದಲ್ಲಿ ಆಸ್ಥೆಯುಳ್ಳವರೂ ವ್ಯಾಪಾರಿಗಳೂ ಆದ ಶ್ರೀ. ಜಿನೇಂದ್ರ ಮಲ್ಲಿನಾಥ ಯಾದವಾಡ ಇವರಿಗೆ ಮೊದಲು ತೋರಿಸಿದೆ. ಆಗವರು “ಏನಡ್ಡಿಯಿಲ್ಲ. ನೂರಿನ್ನೂರು ರೂಪಾಯಿ ಹತ್ತಿದರೂ ಕೊಡುವೆ. ಪ್ರಕಟಿಸಿರಿ.” ಎಂದು ತಟ್ಟನೆ ಹೇಳಿ ಪ್ರೋತ್ಸಾಹಿಸಿ ದರು. ಆದರೆ ಮುಂದೆ ಮೂರು ನಾಲ್ಕು ದಿನಗಳಲ್ಲಿಯೇ ಅವರು ಒಂದು ಕಷ್ಟಕ್ಕೆ ಈಡಾದರು ಆದುದರಿಂದ ಅವರು ಕೊಟ್ಟ ಮಾತು—ನಾನೇ ಕೇಳದುದಕ್ಕಾಗಿ-ಕಾರ್ಯರೂಪದಲ್ಲಿ ಬರದೆ ಹೋಯಿತು.

ಅದೇ ವರ್ಷ ಸೇಡಬಾಳದಲ್ಲಿ ಚಾತುರ್ಮಾಸಗಳನ್ನು ಕಳೆಯಲು ಶ್ರೀ ೧೦೮ ಮಹಾವೀರಕೀರ್ತಿ ಮುನಿಗಳು ಆಗಮಿಸಿದರು. ಅವರು ಗುಜರಾಥ ದವರಾದರೂ ಇಲ್ಲಿಗೆ ಬಂದು ಕನ್ನಡವನ್ನು ಕಲಿತವರು. ಸ್ವಾಮಿಗಳವರು

ನಿತ್ಯಧರ್ಮೋಪದೇಶದ ಸಮಯಕ್ಕೆ ಈ 'ಚಿನ್ಮಯ ಚಿಂತಾಮಣಿ'ಯನ್ನೇ ವಿವರಿಸಿ ಹೇಳತೊಡಗಿದರು. ಆಗ ಈ ಚಿಕ್ಕ ಗ್ರಂಥವು ನೆರೆದ ನಾಗರಿಕರ ಮನಸ್ಸನ್ನು ಆಕರ್ಷಿಸಿತು. ಹಲವರು ಗ್ರಂಥದ ಬಗ್ಗೆ ವಿಚಾರಿಸತೊಡಗಿದರು

ಮುಂದೆ ಈ ಮುನಿಗಳ ಧರ್ಮಬೋಧನೆಯ ಪ್ರಭಾವದ ಪರಿಣಾಮವಾಗಿ ಸ್ವಲ್ಪ ದಿನಗಳಲ್ಲಿಯೇ ನಮ್ಮಲ್ಲಿಂದ ಎಂಬತ್ತು ಎಂಬತ್ತೈದು ಜನರು ಶ್ರೀ ಸಿದ್ಧಕ್ಷೇತ್ರ ಸಮ್ಮೇದ ಶಿಖರದ ಯಾತ್ರೆಮಾಡಿ ಬಂದರು. ಅವರಲ್ಲಿ, ಈ ಮಹಾಯಾತ್ರೆಯ ಸ್ಮೃತಿಗಾಗಿ 'ಚಿನ್ಮಯ ಚಿಂತಾಮಣಿ'ಯನ್ನು ಪ್ರಕಟಿಸಬೇಕೆಂಬ ವಿಚಾರ ಹೊಳೆದುದು ಗೆ. ಜಿನೇಂದ್ರ ಯಾದವಾಡ ಅವರಿಗೇನೇ. ಅವರೂ ಇನ್ನುಳಿದ ಕೆಲವು ಗೆಳೆಯರೂ ಕೂಡಿ ಕೈಕೊಂಡ ಕಾರ್ಯದ ಮೂರ್ತ ಸ್ವರೂಪವೆಂದರೆ ಈ ಪ್ರಕಟನೆಯು.

## ಆಚಾರ್ಯವರ ಕಲ್ಯಾಣಕೀರ್ತಿ

ಜೈನಾಚಾರ್ಯರು ದೀಕ್ಷೆ ತಕ್ಕೊಂಡ ಮೇಲೆ ತಮ್ಮ ತಾಯಿ ತಂದೆಗಳ ಹೆಸರನ್ನಾಗಲಿ, ಊರು ವಂಶಗಳ ನಿರ್ದೇಶನವನ್ನಾಗಲಿ ತಮ್ಮ ಕೃತಿಗಳಲ್ಲಿ ಮಾಡುವದಿಲ್ಲ. ಪ್ರಪಂಚವನ್ನೇ ತ್ಯಾಗಮಾಡಿ ಗುರು ಸೇವೆಯಲ್ಲಿ ನಿಂತ ಮೇಲೆ ಗುರು ಪರಂಪರೆಯನ್ನೇ ಹೇಳುವುದು ಪರಿಪಾಠವಾಗಿದೆ. ಅದರಂತೆ ಕಲ್ಯಾಣ ಕೀರ್ತಿಯ ತಂದೆ ತಾಯಿಗಳ ಹೆಸರು ನಮಗೆ ಗೊತ್ತಾಗದಿದ್ದರೂ ಅವರ ದೀಕ್ಷಾಗುರುಗಳಾದ ಲಲಿತ ಕೀರ್ತಿಗಳ ಹೆಸರು ಗೊತ್ತಾಗುತ್ತದೆ. ಈ ಲಲಿತ ಕೀರ್ತಿ ಭಟ್ಟಾರಕರು ಮೂಲ ಸಂಘದ ದೇಶೀಯ ಗಣದವರು.

ಮುನಿ ಸಂಘಗಳ ಇತಿಹಾಸವು ಇಂದಿಗೂ ಸಂಪೂರ್ಣ ಉಪಲಬ್ಧವಿಲ್ಲ. ಆದರೂ ಅಲ್ಪ ಸ್ವಲ್ಪ ಗೊತ್ತಿದ್ದುದರ ಮೇಲಿಂದ ದಿಗಂಬರ ಸಂಪ್ರದಾಯದಲ್ಲಿ ಮೂಲ ಸಂಘದ ಹೆಸರು ಪ್ರಾಚೀನ ಕಾಲದಿಂದಲೂ ಕೇಳಲ್ಪಡುತ್ತಿದೆಯೆಂಬುದು ಗೊತ್ತಾಗುತ್ತದೆ. ಭಗವದ್ ಗುಣಭದ್ರಾಚಾರ್ಯರು ಉತ್ತರ ಪುರಾಣದಲ್ಲಿ,-

ಶ್ರೀ ಮೂಲ ಸಂಘ ವಾರಾಶೌ ಮಣಿನಾಮಿವ ಸಾರ್ಚಿಷಾಂ ।
ಮಹಾಪುರುಷರತ್ನಾನಾಂ ಸ್ಥಾನಂ ಸೇನಾನ್ವಯೋಜನಿ ॥

ಮೂಲ ಸಂಘವನ್ನು ಕುರಿತು ಹೀಗೆ ಹೇಳಿರುವರು. ಆದರೂ ೭ನೆಯ ಶತಮಾನದ ಹಿಂದಿನ ಲೇಖನಗಳಲ್ಲಿಯೂ ಗ್ರಂಥಗಳಲ್ಲಿಯೂ ಈ ಹೆಸರು ಇದ್ದಂತಿಲ್ಲ. ಯಾಕಂದರೆ ದ್ರಾವಿಡಸಂಘ, ಕಾಷ್ಠಾಸಂಘ, ಶ್ವೇತಾಂಬರ ಸಂಘ ಮೊದಲಾದವುಗಳು ತಮ್ಮ ಅಸ್ತಿತ್ವವನ್ನು—ಪೃಥಕತ್ವವನ್ನು ತೋರಿಸುವ ಸಂದರ್ಭ ಒದಗಿ ಬಂದಾಗ ಮಾತ್ರ ಈ 'ಮೂಲಸಂಘ' ಶಬ್ದದ ಯೋಜನೆಯಾಯಿತು. ಅದಕ್ಕೂ ಮೊದಲು ಮುನಿ ಸಂಘಗಳಿಗೆ 'ನಿರ್ಗ್ರಂಥ ಮಹಾ ಶ್ರಮಣ ಸಂಘ'ವೆಂದು ಕರೆಯುತ್ತಿದ್ದರು.*

ಈ ಮೂಲ ಸಂಘವು ಒಡೆದು ಅನೇಕ ಶಾಖೋಪಶಾಖೆಗಳಾದ ಸಂಗತಿಯನ್ನು ಇಂದ್ರನಂದಿಯ ಶ್ರುತಾವತಾರದಿಂದ ಹೀಗೆ ಸಂಗ್ರಹಿಸಬಹುದು: (ಪಟವನ್ನು ನೋಡಿರಿ. ಪರಿಶಿಷ್ಟ ಅ.)

ಅರ್ಹದ್ಬಲಿ ಆಚಾರ್ಯರು ಪುಂಡ್ರವರ್ಧನ ಎಂಬ ನಗರದಲ್ಲಿ ಒಮ್ಮೆ ಎಲ್ಲ ಮುನಿಗಳನ್ನು ಕರೆಯಿಸಿದ್ದರು. ಆಗ ಅವರು 'ಎಲ್ಲ ಮುನಿಗಳು ಬಂದಿರಾ?' ಎಂದು ಸಮೂಹವನ್ನು ಉದ್ದೇಶಿಸಿ ಕೇಳಿದರು. ಅದಕ್ಕೆ 'ಭಗವಾನ್, ನಾವೆಲ್ಲ ನಮ್ಮ ನಮ್ಮ ಸಂಘಗಳ ಸಹಿತ ಬಂದಿದ್ದೇವೆ.' ಎಂಬ ಉತ್ತರವು ಕೇಳಬಂದಿತು. ಅದರಿಂದ ಆಚಾರ್ಯರು ಇನ್ನು ಮುಂದೆ ಜೈನ ಧರ್ಮ, ಮುನಿಗಳು ಪಂಗಡ ಪಂಗಡಗಳಾಗಿ ಬಾಳತಕ್ಕವರು, ಎಂದು ಗಮನಿಸಿ ಸಂಘಗಳನ್ನು ನಿರ್ಮಿಸಿದರು. (ಶ್ರ. ಬೆ. ಶಿ. ಲೇಖ ನಂ ೧೦೫)

ಗುಹೆಗಳಿಂದ ಬಂದ ತಪಸ್ವಿಗಳಿಗೆ ನಂದಿ, ವೀರ ಎಂದೂ ಅಶೋಕ ವೃಕ್ಷದ ಅಡಿಯಿಂದ ಬಂದವರಿಗೆ ದೇವ, ಅಪರಾಜಿತ ಎಂದೂ ಪಂಚಸ್ತೂಪದಿಂದ ಬಂದವರಿಗೆ ಭದ್ರ, ಸೇನ, ಎಂದೂ ಶಾಲ್ಮಲಿವೃಕ್ಷದ ನೆರಳಿನಿಂದ ಆಗಮಿಸಿದವರಿಗೆ ಗುಣಧರ, ಗುಪ್ತ ಎಂದೂ ನಾಗಕೇಸರ ವೃಕ್ಷದಿಂದ ಬಂದವರಿಗೆ ಸಿಂಹ, ಚಂದ್ರ ಎಂದೂ ಸಂಜ್ಞೆಗಳನ್ನು ಇತ್ತರು.

ಅರ್ಹದ್ಬಲಿ ಆಚಾರ್ಯರು ಕೊಟ್ಟ ಸಂಜ್ಞೆಗಳನ್ನು ಆಯಾ ಆಚಾರ್ಯರು ತಮ್ಮ ಹೆಸರುಗಳ ಮುಂದೆ ಜೋಡಿಸುತ್ತ ಬಂದುದು ಕಂಡು ಬರುತ್ತದೆ. ಉದಾಹರಣೆಗಾಗಿ ಕ್ರಮದಿಂದ ಮಾಘನಂದಿ ಮಿತ್ರವೀರ (ಹರಿವಂಶ ೬೬

* ಜೈನ ಹಿತೈಷಿ ಭಾಗ ೧೪, ಅಂಕ ೭-೮, ಪುಟ ೩೨೪.

ನೆಯ ಸರ್ಗ ನೋಡಿರಿ) ಶ್ರೀಧರದೇವ, ಸಮಂತಭದ್ರ, ಜಿನಸೇನ, ಸರ್ವ ಗುಪ್ತ (ಹರಿವಂಶ) ವಾದೀಭಸಿಂಹ, ವಿಮಲಚಂದ್ರರ ಹೆಸರುಗಳನ್ನು ನಿರೀಕ್ಷಿಸ ಬಹುದು. ಇನ್ನುಳಿದ 'ಗುಣಧರ' 'ಅಪರಾಜಿತ' ಎಂಬ ಸಂಜ್ಞೆಗಳು ಆಚಾರ್ಯರ ಹೆಸರುಗಳ ಕೊನೆಗೆ ಬರಲಿಲ್ಲ. ಅವು ಸ್ವತಂತ್ರ ಹೆಸರಾಗುವ ಯೋಗ್ಯತೆಯುಳ್ಳವುಗಳಾದುದರಿಂದ ಬೇರೆಯಾಗಿಯೇ ಉಳಿದುವು. ಮಾದರಿ ಗಾಗಿ ಭಗವತೀ ಆರಾಧನೆಯ ವಿನಯೋದಯಾ ಟೀಕಾಕಾರನಾದ ಅಪರಾಜಿತ ಆಚಾರ್ಯರ ಹೆಸರನ್ನೂ, ದೋಷಪ್ರಾಭೃತದ ಕರ್ತೃವಾದ ಗುಣಧರ ಮುನಿಯ ನಾಮವನ್ನೂ ಹೇಳಬಹುದು.

ಈ ಸಂಜ್ಞೆಗಳ ನಿರ್ಮಾಣ ಉಪಪತ್ತಿ ದರ್ಶಕವೆಂದು ತಿಳಿಯಲೂ ಬರುವಂತಿಲ್ಲ. ಎಷ್ಟೋ ಮುನಿ ಪರಂಪರೆಗಳಲ್ಲಿ ಈ ಸಂಜ್ಞೆಗಳನ್ನು ಅತಿ ಕ್ರಮಿಸಿದುದೂ ಕಂಡುಬರುತ್ತದೆ. ಉದಾಹರಣೆಗಾಗಿ ಸೇನಸಂಘದ ವೀರ ಸೇನಾಚಾರ್ಯನ ಗುರುಗಳ ಹೆಸರು ಆರ್ಯನಂದಿ ಎಂದಾದದ್ದನ್ನು ಕಾಣ ಬಹುದು. ಇದರಂತೆ ಶ್ರವಣಬೆಳ್ಗೊಳದ ೧೪೯ನೆಯ ಶಿಲಾ ಶಾಸನದಲ್ಲಿ,- (ಕ್ರಿ. ಶ. ೬೫೦)

ಮಮಾ (ಪಂಚ) ಸ್ತೂಪಾನ್ವ... ಸ ಕಲೆ....ಗದ್ ಗುರುಃ ।
ಖ್ಯಾತೋ ವೃಷಭ ನಂದೀತಿ ತಪೋಜ್ಞಾನಾಬ್ಧಿ ಪಾರಗಃ ॥

ಎಂದು ಪಂಚಸ್ತೂಪಾನ್ವಯದ ವೃಷಭನಂದಿಯ ಹೆಸರಿನ ಉಲ್ಲೇಖವೂ ಸಿಕ್ಕುವದು.

ಈ ಮೂಲ ಸಂಘದ ಭೇದಗಳೆಲ್ಲ ಅಕಲಂಕದೇವನು ಸ್ವರ್ಗವಾಸಿಯಾದ ನಂತರ ನಿರ್ಮಾಣವಾದವೆಂದು ಕವಿವರ ಮಂಗರಾಜನು ಹೇಳುತ್ತಾನೆ. (ಶ್ರ. ಬೆ. ಶಿ. ಶಾಸನ ೧೦೮) ಮುಂದೆ ಬರಬರುತ್ತ ನಂದಿ, ಸೇನ, ದೇವ, ಮತ್ತು ಸಿಂಹ ಎಂಬ ನಾಲ್ಕು ಸಂಘಗಳೇ ಹೆಚ್ಚು ಪರಿಚಿತವಾಗಿವೆ. ಈ ಪ್ರತಿ ಯೊಂದು ಸಂಘದಲ್ಲಿಯೂ ಅನೇಕ ಒಳಭೇದಗಳೂ ಕಾಲಾನುಕ್ರಮದಲ್ಲಿ ಹುಟ್ಟಿ ಬೆಳೆದು ಬಾಳಿದುವು.

ರಾಷ್ಟ್ರಕೂಟ ನರೇಶ ಪ್ರಭೂತವರ್ಷನ ಒಂದು ದಾನಪತ್ರವು ಶಕ ಸಂವತ್ಸರ ೭೨೪ ರಲ್ಲಿ ಬರೆಯಲ್ಪಟ್ಟಿದೆ. ಅದರಲ್ಲಿ ಮಾನ್ಯಪುರದ ಶಿಲಾಗ್ರಾಮ ವೆಂಬ ಜಿನಮಂದಿರಕ್ಕೆ ಉಪಯೋಗಿಸುವದಕ್ಕಾಗಿ ಜಾಲಮಂಗಲ ಗ್ರಾಮವನ್ನು

ವಿಜಯಕೀರ್ತಿ ಅರ್ಕಕೀರ್ತಿ ಮುನಿಗಳಿಗೆ ದಾನಕೊಟ್ಟದ್ದು ವಿವರಿಸಿದೆ. ಆ ಲೇಖನದಲ್ಲಿ "ಶ್ರೀಯಾಪನೀಯ ನಂದಿಸಂಘ ಪುನ್ನಾಗವೃಕ್ಷ ಮೂಲಗಣೆ" ಎಂಬ ಪದ ಪ್ರಯೋಗ ಸಿಕ್ಕುತ್ತದೆ. ಶ್ರುತಾವತಾರದಲ್ಲಿ ಬರುವ ನಾಗಕೇಸರ ವೃಕ್ಷಕ್ಕೇನೇ ಪುನ್ನಾಗವೆಂಬ ಹೆಸರು. ಇಲ್ಲಿ ನಂದಿಸಂಘ ಪುನ್ನಾಗ ವೃಕ್ಷದ ಮೂಲದ ಆಚಾರ್ಯರೆಂದು ಹೇಳಲಾಗಿದೆ. ಈ ವಿಷಯ ಸ್ವಲ್ಪ ಗೊಂದಲಕ್ಕೆ ಕಾರಣವಾಗುವದು.

ಈ ಗೊಂದಲವೂ ಸ್ವಲ್ಪ ವಿಚಾರಿಸಿದರೆ ಹೋಗುವಂತಿದೆ. ಜಿನಸೇನನ ಗುರುಗಳಾದ ವೀರಸೇನರು ತಮ್ಮ ಧವಲಟೀಕೆಯ ಪ್ರಶಸ್ತಿಯಲ್ಲಿಯೂ ತಮ್ಮ ಸಂಘದ ವಿಷಯಕ್ಕೆ ಹೀಗೆ ಹೇಳಿರುವರು:

ಅಜ್ಜಜ್ಜಣಂದಿ ಸಿಸ್ಸೇಣುಜ್ಜವ ಕಮ್ಮಸ್ಸಚಂದಸೇಣಸ್ಸ ।
ತಹಣತ್ತುವೇಣ ಪಂಚತ್ಥೂಹಣ್ಣಯಭಾಣುಣಾ ಮುಣಿಣಾ ॥

(ಆರ್ಯ ಆರ್ಯನಂದಿಯ ಶಿಷ್ಯನೂ ಚಂದ್ರಸೇನನ ಪ್ರಶಿಷ್ಯನೂ ಪಂಚಸ್ತೂಪಾನ್ವಯದ ಸೂರ್ಯನೂ ಆದ ವೀರಸೇನ ಸ್ವಾಮಿಯು)

ಈ ಉದಾಹರಣೆಯು ಮೇಲಿಂದ ಸೇನಸಂಘ ಪಂಚಸ್ತೂಪಾನ್ವಯಗಳು. ಒಂದರ ಅಂಗ ಇನ್ನೊಂದು ಎಂದು ಗೊತ್ತಾಗುವಂತಿದೆ.

ಇದೇ ರೀತಿ ನಂದಿಸಂಘದ ಒಂದು ಮಿಶ್ರಶಾಖೆ ಪುನ್ನಾಗ ಸಂಘವೆಂಬು ದನ್ನು ಗಮನಿಸಲು ಅಡ್ಡಿಯಿಲ್ಲ. ಈ ಪುನ್ನಾಗ ಶಾಖೆಯ ಆಚಾರ್ಯರ ಹೆಸರುಗಳ ಕೊನೆಗೆ 'ಕೀರ್ತಿ' ಎಂಬ ಉಪಪದ ಬಳಿಕೆಯಲ್ಲಿ ಬಂದಿದೆ.

ಸಾಮಾನ್ಯವಾಗಿ ಸಂಘಗಳಿಗೆ ಗಣ, ಗಚ್ಛ, (ಬಲಿ) ಅನ್ವಯ ಎಂದೂ ಕರೆಯುವ ರೂಢಿಯುಂಟು. ಆದರೂ ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಸಂಘದ ಅಂಗಗಳಿಗೆ ಗಣವೆಂದೂ ಉಪಾಂಗ ಪ್ರತ್ಯಾಂಗಗಳಿಗೆ ಗಚ್ಛ, ಅನ್ವಯಗಳೆಂದೂ ಹೇಳುವ ವಾಡಿಕೆಯಿದ್ದಂತೆ ಕಂಡುಬರುವದು. ಉದಾಹರಣೆಗಾಗಿ 'ನಂದಿ ಸಂಘೇ ದೇಶೀಯ ಗಣೆ ಪುಸ್ತಕ ಗಚ್ಛೆ ಕುಂದಕುಂದಾನ್ವಯೆ' ಎಂದು ಹೇಳುವ ಉಕ್ತಿಯನ್ನು ನಿರೀಕ್ಷಿಸಬಹುದು.

ಇಲ್ಲಿಯ ವರೆಗೆ ಬಲತ್ಕಾರ ಗಣ, ದೇಶೀಯ ಗಣ, ಕಾಣೂರ ಗಣಗಳ ಉಲ್ಲೇಖಗಳು ಸಿಕ್ಕಿವೆ.

ಇವುಗಳಲ್ಲಿ ದೇಶೀಯ ಗಣದಲ್ಲಿ ಅರುಂಗಲಾನ್ವಯ, ಶ್ರೀ ಪುರಾನ್ವಯ, ದಿಂಡಿಗೂರಾನ್ವಯ, ಮೊದಲಾದ ಸ್ಥಳೀಯ ಶಾಖೆಗಳಿದ್ದುದೂ ಕಂಡು ಬರುತ್ತದೆ.

ಹೀಗೆ ನಂದಿಸಂಘದ ಶಾಖೆಗಳಲ್ಲಿ ಪುನ್ನಾಟ (ಕರ್ನಾಟ) ದೇಶೀಯ ಶಾಖೆಯೊಂದು. ಪುನ್ನಾಟ ಶಬ್ದಕ್ಕೆ ನಾಗಕೇಸರವೆಂದೂ ಪುನ್ನಾಗವೆಂದೂ ಅರ್ಥ ವಿವರಣೆಯಿದೆ. (ಪ್ರೊ. ವೈದ್ಯರ 'ದಿ ಸ್ಟೆಂಡರ್ಡ ಸಂಸ್ಕೃತ ಇಂಗ್ಲೀಷ ಡಿಕ್ಸನರಿ' ಪು. ೪೪೧) ಪ್ರಾಚೀನ ಕಾಲದಲ್ಲಿ ಪುನ್ನಾಗ (ಸುರಹೊನ್ನೆ) ವೃಕ್ಷಗಳು ಕರ್ನಾಟಕ ಪ್ರಾಂತದಲ್ಲಿ ಬಹಳವಿರಬೇಕು. ಆದರಿಂದ ಈ ನಾಡಿಗೆ 'ಪುನ್ನಾಟ' ಎಂಬ ಹೆಸರು ಬಂದಿರಬಹುವೆಂದು ಇಲ್ಲಿ ಅನುಮಾನಿಸ ಬಹುದಾಗಿದೆ.

ಈ ಪುನ್ನಾಟ ಶಬ್ದ ಪ್ರಯೋಗವು ಜೈನ ಸಾಹಿತ್ಯದಲ್ಲಿ ಅನೇಕ ಕಡೆಗೆ ನೋಡಲು ಸಿಕ್ಕುವದು. ಜಿನಸೇನನ ಹರಿವಂಶದಲ್ಲಿ "ವ್ಯುತ್ಸೃಷ್ಟಾಪರಸಂಘ ಸಂತತಿ ಬೃಹತ್ ಪುನ್ನಾಟ ಸಂಘಾನ್ವಯೆ." ಎಂದು ಪುನ್ನಾಟ ಸಂಘದ ಹಿರಿಮೆ ಹೇಳಲ್ಪಟ್ಟಿದೆ.

ಶ್ರೀಯುತ ವಾಮನ ಶಿವರಾಮ ಆಪಟೆಯವರ ಸಂಸ್ಕೃತ-ಇಂಗ್ಲೀಷ ಕೋಶದಲ್ಲಿ 'ಪುನ್ನಾಟ'ದ ಅರ್ಥ ಕರ್ನಾಟಕ ದೇಶವೆಂದಿದೆ. ಕೆಲವು ಸಂಸ್ಕೃತ ಕೋಶಗಳಲ್ಲಿ 'ನಾಟ' ಶಬ್ದಕ್ಕೂ ಕರ್ನಾಟಕವೆಂದು ಅರ್ಥ ಹೇಳಲಾಗಿದೆ. ಗ್ರೀಕದೇಶದ ಟಾಲೆಮಿಯು ತನ್ನ ಭೂಗೋಲದಲ್ಲಿ ಈ ಪುನ್ನಾಟ ನಾಡಿಗೆ 'ಪೌನಟ' ಎಂದು ಕರದಿರುವನು. ಮೈಸೂರು ಭಾಗದಲ್ಲಿರುವ ಕಿತ್ತೂರ (ಕೀರ್ತಿಪುರ) ನಗರ ಈ ಪುನ್ನಾಟ ರಾಜ್ಯದ ರಾಜಧಾನಿ ಇತ್ತೆಂದು ಉಲ್ಲೇಖವೂ ಸಿಕ್ಕುತ್ತದೆ.

ಆಚಾರ್ಯ ಹರಿಷೇಣನು ತನ್ನ ಬೃಹತ್‌ಕಥಾಕೋಶದ ಭದ್ರಬಾಹು ಕಥೆಯಲ್ಲಿಯೂ ಹೇಳಿರುವನು:

ಅನೇನ ಸಹ ಸಂಘೋಽಪಿ ಸಮುಸ್ತೋ ಗುರುವಾಕ್ಯತಃ ।
ದಕ್ಷಿಣಾಪಥ ದೇಶಸ್ಥ ಪುನ್ನಾಟ ವಿಷಯಂ ಯ ಯೌ ॥ ೪ ॥

ಹೀಗೆ ಸಂಸ್ಕೃತ ಸಾಹಿತ್ಯದಲ್ಲಿಯೂ ಕೂಡ 'ಪುನ್ನಾಟ' ದೇಶವಾಚಕ

ಶಬ್ದವೆಂದು ಬಳಸಲ್ಪಟ್ಟಿದೆ. ಭದ್ರಬಾಹು ಸ್ವಾಮಿಗಳು ಕರ್ನಾಟಕಕ್ಕೆ ಬಂದ ಸಮಯಕ್ಕೆ ಶ್ರವಣಬೆಳ್ಗೊಳದ ಸುತ್ತಲಿನ ಸೀಮೆಗೆಲ್ಲ ಪುನ್ನಾಟವೆಂದು ಕರೆಯುತ್ತಿದ್ದರು.

ಇನ್ನು ಅಭಿಮಾನಮೇರು ಮಹಾಕವಿ ಪುಷ್ಪದಂತನು ತನ್ನ ಆದಿ ಪುರಾಣದ ಐದನೆಯ ಪರಿಚ್ಛೇದದಲ್ಲಿ,—

" ದವಿಡ-ಗಉಡ-ಕಣ್ಣಾಡ-ಬರಾಡವಿ, ಪಾರಸ ಪಾರಿಯಾಯ-ಪುಣ್ಣಾಡವಿ " ಎಂದು ದ್ರಾವಿಡ ಗೌಡ ವರಾಟ ಪಾರಸ ಪಾರಿಯಾತ್ರ ಮೊದಲಾದ ಅನೇಕ ದೇಶಗಳ ಹೆಸರಿನ ಜೊತೆಗೆ 'ಕಣ್ಣಾಡ ಪುಣ್ಣಾಡ'ಗಳೆರಡನ್ನೂ ಹೇಳಿದ್ದಾನೆ. ನೃಪತುಂಗನು ಹೇಳುವ 'ಕಾವೇರಿಯಿಂದಮಾಗೋದಾವರಿ ವರೆಗಿರ್ದ ನಾಡು' ಕನ್ನಾಡವಾಗಿದ್ದು, ಅದರೊಳಗಿನ 'ತಿರುಳ್ಗನ್ನಡ' ನಾಡು ಪುನ್ನಾಡವಾಗಿರಬೇಕೇನೊ!

ಈ ಪುನ್ನಾಡದ ಮುನಿಸಂಘಕ್ಕೆ ಪುನ್ನಾಡ—ಪುನ್ನಾಟ—ಸಂಘವೆಂದು ಹೆಸರು.

ಇನ್ನು ಶ್ರವಣಬೆಳ್ಗೊಳದ ೪೯೬, ೨೭ನೆಯ ಶಿಲಾ ಶಾಸನಗಳಲ್ಲಿ ಬರುವ ಲಾತೂರು ನವಿಲೂರು ಸಂಘಗಳೂ ಪುನ್ನಾಟ ಸಂಘದ ದೇಶೀಯ ಗಣದ ಸ್ಥಳಿಕ ಶಾಖೆಗಳಿರಬೇಕು.

ಇವುಗಳಂತೆ ಕಾರಂಜಾ, ತೇರದಾಳ, ಕೊಲ್ಹಾಪುರ, ರಾಯಬಾಗ, ಬೆಳಗಾಂವ, ಹೊಸೂರು, ಹುಂಬುಚ, ಕಾಂಚಿ, ಸಾದಿ, ಬೆಳಗೊಳ, ಮೂಡಬಿದ್ರಿ, ಕಾರ್ಕಳ (ತುಳುದೇಶ) ಮೊದಲಾದ ಸ್ಥಳಗಳಲ್ಲಿಯೂ ಶಾಖೆಗಳು ಇದ್ದುದು ಕಂಡುಬರುತ್ತದೆ.

ಈ ಸ್ಥಳಿಕ ಶಾಖೆಗಳು ಜೈನ ಧರ್ಮ, ಸಂಸ್ಕೃತಿ, ಸಾಹಿತ್ಯಗಳ ರಕ್ಷಣೆ ಪೋಷಣೆ, ಪ್ರಸಾರಗಳ ಹೊಣೆಯನ್ನು ಹೊತ್ತು ನಿಂತಿದ್ದುವು, ನಾಡಿನ ಮೂಲೆ ಮೂಲೆಗಳಲ್ಲಿ ವಿದ್ಯಾಪೀಠಗಳಾಗಿದ್ದುವು. ಆದಕ್ಕಾಗಿ ಅವು ರಾಜಾಶ್ರಯವಿದ್ದಲ್ಲಿ—ಜಿನ ಧರ್ಮ ಖಿಲವಾಗುತ್ತಿರುವಲ್ಲಿ-ಹೆಚ್ಚಾಗಿ ಸ್ಥಾಪಿಸಲ್ಪಡುತ್ತಿದ್ದುವು. ಕಾರ್ಕಳದ ಸುತ್ತಲಿನ ಶಾಖೆಗೆಲ್ಲ ಅಲ್ಲಿಯ 'ಭೈರರಸ ಒಡೆಯರ ಆಶ್ರಯವಿದ್ದಿತು. ಅಂತಲೇ ಅಲ್ಲಿಯ ಆಚಾರ್ಯ ಪರಂಪರೆಯಲ್ಲಿ ಕಲ್ಯಾಣ ಕೀರ್ತಿ ರತ್ನಾಕರ ವರ್ಣಿಗಳಂತಹ ಉದ್ದಾಮ ಕವಿಗಳು ಬೆಳಕಿಗೆ ಬಂದರು.

ಕ್ರಿ. ಶ. ೫ನೆಯ ಶತಮಾನದ ಪೂರ್ವದಲ್ಲಿ ಜೈನಾಚಾರ್ಯರು ವನ, ಗುಹೆಗಳಲ್ಲಿ ವಾಸಿಸುತ್ತಿದ್ದರು. ಅಲ್ಲಿದ್ದುಕೊಂಡೇ ತಪ, ಧ್ಯಾನ, ಅಧ್ಯಯನ ಗಳನ್ನು ಸಾಗಿಸುತ್ತಿದ್ದರು. ಮುಂದೆ ಅನ್ಯ ಧರ್ಮದ ಆಚಾರ್ಯರು ತಮ್ಮ ತಮ್ಮ ಧರ್ಮಗಳನ್ನು ಜನರಲ್ಲಿ ನಿಂತು ಪ್ರಸಾರ ಮಾಡತೊಡಗಿದ್ದರಿಂದ ಅದರ ಪ್ರತೀಕಾರಕ್ಕಾಗಿ ಜೈನಾಚಾರ್ಯರೂ ತಮ್ಮ ವಾಸಸ್ಥಾನವನ್ನು ಬದಲಿಸ ಬೇಕಾಯಿತು. ನಗರಗಳಲ್ಲಿ ಬಂದು, ಮುನಿವಾಸಗಳಲ್ಲಿ ನಿಂತು, ಜಿನಧರ್ಮೋಪ ದೇಶ ಮಾಡತೊಡಗಿದರು. ಅದಕ್ಕಾಗಿ ಅಲ್ಲಲ್ಲಿ ವಿದ್ಯಾಪೀಠ, ಮಠ, ಅಗ್ರ- ಹಾರಗಳನ್ನು ಸ್ಥಾಪಿಸಿದರು. ಇಂಥ ಮಠಗಳು ಕರ್ನಾಟಕದಲ್ಲಿ ಅಷ್ಟೇ ಇದ್ದವೆಂದು ಭಾವಿಸಬೇಕಿಲ್ಲ. ದಿಲ್ಲಿ, ಕೊಲ್ಹಾಪುರ ಜಿನಕಂಚಿ, ಪೆನುಗೊಂಡಿ ಮೊದಲಾದ ಭಾರತದ ಮುಖ್ಯ ಮುಖ್ಯ ನಗರಗಳಲ್ಲಿ ಪ್ರಮುಖ ಸಂಸ್ಥೆ ಗಳಿದ್ದುವು. ಇವುಗಳ ಶಾಖೋಪಶಾಖೆಗಳು ಎಲ್ಲೆಡೆಗೂ ಪಸರಿಸಿ ಧರ್ಮದ ಆಡಳಿತೆಯನ್ನು ನಡೆಯಿಸುತ್ತಿದ್ದವು.

ಧರ್ಮ ಪ್ರಸಾರಕ್ಕೆ ರಾಜಾಶ್ರಯದಷ್ಟೇ—ಒಂದು ದೃಷ್ಟಿಯಿಂದ ಅದಕ್ಕಿಂತ ಮಿಗಿಲಾಗಿ ಈ ಮುನಿಸಂಘಗಳು ಉಪಯೋಗಬಿದ್ದುವು. ಇದನ್ನು ಅರಿತು ವೈದಿಕರೂ ವೀರಶೈವರೂ ಜೈನ ಧರ್ಮಾಚಾರ್ಯರು ರೂಢಿಯಲ್ಲಿ ತಂದ ಈ ಸಂಸ್ಥೆಗಳ ಅನುಕರಣವನ್ನು ಮಾಡಿ ತಮ್ಮ ತಮ್ಮ ಧರ್ಮ ಪ್ರಸಾರಕ್ಕಾಗಿಯೂ ಮಠಗಳನ್ನು ಸ್ಥಾಪಿಸತೊಡಗಿದರು.

ಧಾರ್ಮಿಕ ದೃಷ್ಟಿಯಿಂದ ಸ್ಥಾಪಿಸಲ್ಪಟ್ಟ ಸಂಘ, ಸಂಘಾಧಿಕಾರಿಗಳು ವಾಙ್ಮಯ ಸೇವೆಯನ್ನೂ ಮಾಡಿ ಜೈನರ ಹೆಸರನ್ನು ಅಜರಾಮರಗೊಳಿಸಿದ್ದಾರೆ. ಅದರ ಜೊತೆಗೆ ಅಲ್ಲಲ್ಲಿಯ ರಾಜ ಸಾಮಂತರಿಂದ ಭೂಮಿಗಳನ್ನು ಕಾಣಿಕೆ ಯಾಗಿ ಪಡೆದು ವಿದ್ಯಾಪೀಠಗಳು ಚಿರಸ್ಥಾಯಿಯಾಗಿ ನಿಲ್ಲುವಂತೆ ಪ್ರಯತ್ನಿ ಸಿದ್ದಾರೆ. ಸ್ಥಳಿಕ ಶಾಖೆಯ ಆಚಾರ್ಯರುಅಲ್ಲಲ್ಲಿಯ ರಾಜಗುರುಗಳಾಗಿದ್ದಂತೆ, ಜಿನಮಂದಿರಗಳ ಪ್ರತಿಷ್ಠಾಪಕರೂ ವ್ಯವಸ್ಥಾಪಕರೂ ಆಗಿ ಕೆಲಸ ಮಾಡಿದ ಉದಾಹರಣೆಗಳು ಹಲವು ಇವೆ.

ಭೈರರಸ ಒಡೆಯರ ಮನೆತನವು ಹೆಸರಾದ ಸಾಮಂತ ಶಾಂತರ ವಂಶಕ್ಕೆ ಸೇರಿದುದು. ಶಾಂತರು ಕ್ರಿ. ಶ. ೭ನೆಯ ಶತಮಾನದಿಂದಲೂ ಪ್ರಸಿದ್ಧ ರಾದವರು. ಇವರು ಉತ್ತರ ಮಧುರಾಪುರದ ಒಡೆಯರಾಗಿದ್ದರು. ಈ

ವಂಶದಲ್ಲಿಯೇ ಹೊಂಬುಜ ಪದ್ಮಾವತಿದೇವಿಯ ಭಕ್ತನಾದ ಜಿನದತ್ತ ರಾಯನು ಜನಿಸಿದನು. (ಕ್ರಿ. ಶ. ೯ನೆಯ ಶತಮಾನ) ಮುಂದೆ ೧೨ನೆಯ ಶತಮಾನದ ಕೊನೆಗೆ ಇವರ ರಾಜಧಾನಿಯು ಹೊಂಬುಜದಿಂದ (ಮೂಡಗೆರೆ ತಾಲ್ಲೂಕಿನ) ಕಲಶಕ್ಕೆ ಬದಲಾಯಿತು. ಅಂದಿನಿಂದ ಈ ಮನೆತನಕ್ಕೆ ಕಲಶರು ಎಂದೂ ಕೆಲದಿನ ಹೆಸರಿತ್ತು. ಈ ಕಲಶರಲ್ಲಿಯ ವೀರಪಾಂಡ್ಯನೇ ಕ್ರಿ. ಶ. ೧೪೩೨ರಲ್ಲಿ ತನ್ನ ಗುರುಗಳಾದ ಲಲಿತಕೀರ್ತಿ ಆಚಾರ್ಯ (ಕಲ್ಯಾಣ ಕೀರ್ತಿಯ ಗುರುಗಳು)ರ ಹಸ್ತದಿಂದ ಕಾರ್ಕಳದಲ್ಲಿ (ತುಳುವನಾಡು) ಗೊಮ್ಮಟನ ಮಹಾ ಶಿಲಾವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿಸಿದನು. ಮುಂದೆ ಕಾರ್ಕಳವೇ ರಾಜಧಾನಿಯಾಗಿ ಮೆರೆಯಿತು. ಕಲಶರೇ ಭೈರವರಸ ರಾಗಿ ಬಾಳಿದರು.

ಇರಲಿ. ಈ ಮೂರ್ತಿ ಪ್ರತಿಷ್ಠಾಪನೆಯಾದ ನಂತರ ಏಳೇ ವರ್ಷ ಗಳಲ್ಲಿ ಕಲ್ಯಾಣಕೀರ್ತಿಯು 'ಜ್ಞಾನ ಚಂದ್ರಾಭ್ಯುದಯ'ವನ್ನು ಬರೆದನು. ಮೇಲಾಗಿ ಕಾಮನ ಕಥೆಯನ್ನು ಪಾಂಡ್ಯರಾಯನ ಇಷ್ಟಾನುಸಾರವಾಗಿ ಬರೆ ದಿರುವೆನೆಂದೂ ಹೇಳಿಕೊಂಡಿದ್ದಾನೆ. ಆದುದರಿಂದ ಪಾಂಡ್ಯರಾಜನ ಆಸ್ಥಾನ ದಲ್ಲಿ ಹೆಸರಾದ ಕವಿಯಾಗಿಯೂ ಕಾರ್ಕಳ ವಿದ್ಯಾಪೀಠದ ಅಧಿಪತಿಯಾಗಿಯೂ ಲಲಿತಕೀರ್ತಿಯ ನಂತರ ಅಲ್ಲಿಯ ಮುನಿಸಂಘದ ಆಚಾರ್ಯನಾಗಿಯೂ ರಾಜಸಂಪೂಜಿತನಾಗಿಯೂ ಕಲ್ಯಾಣಕೀರ್ತಿಯು ಬಾಳಿದನು, ಬೆಳಗಿದನು.

## ಚಿನ್ಮಯ ಚಿಂತಾಮಣಿ

ಚಿನ್ಮಯ ಚಿಂತಾಮಣಿಯು ಆಧ್ಯಾತ್ಮಿಕ ಗ್ರಂಥವು. ಇದರ ಹೆಸರೇ ಸೂಚಿಸುವಂತೆ ಓದುಗರಲ್ಲಿ ಆತ್ಮಜ್ಞಾನವನ್ನು ಕುದುರಿಸುವದರಲ್ಲಿ ಹಿರಿ ಮಣಿಯಿದು. ಇದರ ತಿರುಳು ಆಧ್ಯಾತ್ಮರಸಗಂಗೆಯ ಗಂಗೋತ್ರಿಯು. ಅದನ್ನು ಸ್ವಲ್ಪದರಲ್ಲಿ ಹೀಗೆ ಕಾಣಿಸಬಹುದು:

ಈ ಜೀವಾತ್ಮನು ಶುದ್ಧ ಸ್ವರೂಪನು. ಆದರೂ ಪೂರ್ವಕರ್ಮಗಳಿಂದ ಮೋಹಗಳಲ್ಲಿ ಬೀಳುತ್ತಾನೆ. ಆ ಮೋಹದಿಂದ ಪರಿಗ್ರಹಗಳ ಲಾಲಸೆಯನ್ನು ತಾಳುವನು. ಈ ಬಾಹ್ಯಲಾಲಸೆಯು ಆತ್ಮೋನ್ನತಿಗೆ ಘಾತುಕವಾದುದು. ಅದರೊಳಗಿಂದ ಧರ್ಮವೇ ಆತ್ಮನನ್ನು ರಕ್ಷಿಸಿಕೊಳ್ಳುವಂತಹದು. ತಾನು

ಬೇರೆ, ತನ್ನದೆನ್ನುವ ದೇಹ ಬೇರೆ ಎಂಬ ತಿಳಿವು ಉಂಟಾಗದ ಹೊರತು ಆತ್ಮನು ಪರಮಾತ್ಮನಾಗಲಾರನು. ತನ್ನವನು ತಾನೇ ಎಂಬ ಭಾವನೆಯಿಂದ ಎಲ್ಲ ತರದ ಮೋಹಗಳನ್ನು ಬಿಡಬೇಕು. ಈ ಪ್ರಪಂಚದಲ್ಲಿ ಹೇಸಿಕೆ ಬರುವಂತಹ ದೇಹ ಹಲವು ಸಲ ಪ್ರಾಪ್ತವಾಗುತ್ತದೆ. ಆದ್ದರಿಂದ ಒಳ್ಳೆಯ ಧ್ಯಾನದಿಂದ ಆತ್ಮಜ್ಞಾನ ಪಡೆಯಬೇಕು. ಕರ್ಮಮಲ ತೊಳೆಯಬೇಕು. ಪುನರ್ಜನ್ಮದಿಂದ ಪಾರಾಗಬೇಕು. ಬಾಹ್ಯಾಚರಣೆಗಳ ಮಹತ್ವವು ಇದೆ, ಆದರೂ ಅದು ಆತ್ಮಜ್ಞಾನಕ್ಕೆ ಸರಿಗಟ್ಟದು. ಕಟ್ಟಿಗೆಯಲ್ಲಿ ಇರುವ ಬೆಂಕಿಯು ಘರ್ಷಣೆಯಿಂದ ಪ್ರಕಟವಾಗುವಂತೆ ಆತ್ಮಜ್ಞಾನಿಗಳು ಈ ದೇಹದಲ್ಲಿರುವ ಆತ್ಮನನ್ನು ಉಜ್ವಲಗೊಳಿಸುವರು. ಕರ್ಮರಹಿತನಾದ ಆತ್ಮನೇ ಅನಂತಚತುಷ್ಟಯ ಯುಕ್ತನಾದ ಪರಮಾತ್ಮನು. ಧ್ಯಾನದ ಬಲದಿಂದ ಎಂಟು ಕರ್ಮಗಳು ನಾಶವಾಗಿ ಆತ್ಮನಲ್ಲಿ ಎಂಟು ಗುಣಗಳು ವಿಕಾಸ ಹೊಂದುತ್ತವೆ. ಹೀಗೆ ಆಗುವುದೇ ಆಧ್ಯಾತ್ಮಸಮರಸವು. ಯೋಗಿಗಳಿಗೆ ಪರಮಾತ್ಮ ದರ್ಶನವೇ ಶ್ರೇಷ್ಠವಾದ ಧ್ಯೇಯವು, ಬಾಲ್ಯ, ತಾರುಣ್ಯ, ಮುಪ್ಪು ಮೊದಲಾದ ಅವಸ್ಥೆಗಳು ಶರೀರಕ್ಕೇನೇ ಹೊರತು ಚಿದಾನಂದಮಯನಾದ ಆತ್ಮನಿಗಲ್ಲ. ಪರಮಾತ್ಮನು ಗುಣಮಯನೆಂದು ಭಾವಿಸುವುದಾದರೆ ದರ್ಶನ, ಜ್ಞಾನ ಚಾರಿತ್ರ್ಯಗಳೇ ಆತನ ಗುಣಗಳು. ಈ ಮೂರು ಗುಣಗಳಾದರೂ ಆತನ ಚಿತ್‌ಶಕ್ತಿಯಲ್ಲಿ ಒಂದಾಗಿ ಬಿಟ್ಟವೆ. ಹೊರಗಿನ ಪೂಜೆ ಪುನಸ್ಕಾರಗಳು ಲೌಕಿಕ ಕೃತ್ಯಗಳು. ಆತ್ಮನ ದರ್ಶನವು ನಿಶ್ಚಯನಯದಿಂದಲೇ ಹೊರತು ಲೌಕಿಕ ಕಾರ್ಯಗಳಿಂದಲ್ಲ.

ಕಲ್ಯಾಣಕೀರ್ತಿಯ ಈ ಅಮರವಾಣಿಯು ಭಾರತೀಯರ ಆಧ್ಯಾತ್ಮ ಜೀವನದ ತಳಹದಿಯಾಗಿದೆಯೆಂಬುದು ವೈದಿಕ, ಬೌದ್ಧ, ವೀರಶೈವ ಮೊದಲಾದ ಧರ್ಮತತ್ವಗಳೊಡನೆ ತೂಗಿ ನೋಡಿದರೆ ಗೊತ್ತಾಗುವಂತಿದೆ. ಚಿನ್ಮಯ ಚಿಂತಾಮಣಿಯೊಳಗಿನ "ಓರ್ವನೆ ಕರ್ಮವ ಮಾಡುವನು ಓರ್ವನೆ ದುಃಖವನುಂಬುವನು ಓರ್ವನೆ ಭವದೊಳು ತೊಳಲುವನು" "ಚತುರಾಸೀತಿ ಲಕ್ಷ ಭವದೊಳು ಬಂದು........ಜಲಧಿಗತ ಪಕ್ಷಿಯ ಪರಿಯಂತಾದಿ........" ಎಂಬ ಮೊದಲಾದ ಮಾತುಗಳ ಮಹತಿಯನ್ನು ವೈದಿಕರು ಶ್ರುತಿಯಲ್ಲಿ ಸಾರುವ :

ಕುರ್ವಂತಿ ಕರ್ಮ ಭೋಗಾಯ ಕರ್ಮ ಕರ್ತುಂಚ ಭುಂಜತೆ ||
ನದ್ಯಾಂ ಕೀಟಾ ಇವಾವರ್ತಾದಾವರ್ತಾಂತರ ಮಾಶುತೆ |
ವಜ್ರಂತೊ ಜನ್ಮನೋ ಜನ್ಮ ಲಭಂತೆ ನೈವ ನಿವೃತ್ತಿಂ ||

(ದೇಹಕ್ಕೆ ಅನುಗುಣವಾದ ಕರ್ಮಗಳಿಂದ ಆತ್ಮನು ಮೋಹದಲ್ಲಿ ಬೀಳುವನು. ಆದರಿಂದ ಭವಬಂಧನವಾಗುವದು. ಪ್ರವಾಹದಲ್ಲಿ ಹುಳಬಿದ್ದಂತೆ ಅವನ ಗತಿ. ನಿವೃತ್ತಿ ಎಲ್ಲಿಂದ ಬಂದೀತು?) ಈ ವಚನಗಳೊಡನೆ ತೂಗಿ ನೋಡಬೇಕು! ಎಂಥ ಉದಾತ್ತ ವಿಚಾರಗಳನ್ನು ಆದೆಂಥ ಸರಳ ಶೈಲಿಯಲ್ಲಿ ಎಳೆಮಕ್ಕಳಿಗೂ ತಿಳಿಯುವಂತೆ ಹೇಳಿದ್ದಾನೆ, ಕಲ್ಯಾಣಕೀರ್ತಿ!

ಮೇಲಿನ ಮಾತುಗಳನ್ನೂ ಇನ್ನುಳಿದ "ಕಲಿಲ ವಿಬಂಧದ ಭರದಿಂದ ಅಲಸದಿ ಮೂಜಗದಲ್ಲಿ ಬಳಲುತ" ಆತ್ಮನಿದ್ದಾನೆ; ಕರ್ಮ ಬಂಧನವನ್ನು "ಕೆಡಿಸಿದೊಡಮಲನು ನೀನು" ಇತ್ಯಾದಿ ವಾಕ್ಯಗಳನ್ನೂ ಬೌದ್ಧರ "ವಿವೇಕ ವಿಲಾಸ" ವೆಂಬ ಧರ್ಮ ಶಾಸ್ತ್ರದಲ್ಲಿ ಬರುವ

ರಾಗಾದಿ ಜ್ಞಾನಸಂತಾನ ವಾಸನಾ ಛೇದ ಸಂಭವಾ |
ಚತುರ್ಣಾಮಪಿ ಬೌದ್ಧಾನಾಂ ಮುಕ್ತಿರೇಷಾ ಪ್ರಕೀರ್ತಿತಾ ||

ಈ ವಚನದೊಡನೆ ಹೊಂದಿಸಿಟ್ಟು ಓದಬೇಕು. ಆಗ ಕಲ್ಯಾಣಕೀರ್ತಿಯ ಆಧ್ಯಾತ್ಮ ಸಾಧನೆಯ ಸ್ವಾರಸ್ಯವು ಹೊಳೆಯುವದು, ತಪಸ್ಸಿದ್ಧಿಯ ಮೇಲೆ ಬೆಳಕು ಬೀಳುವದು.

ಇದೇ ರೀತಿ ಈ ಗ್ರಂಥದಲ್ಲಿ ಹೇಳಿರುವ ಆತ್ಮ ಪರಮಾತ್ಮರ ಸ್ವರೂಪ ವನ್ನೂ ಆತ್ಮ ದೇಹಗಳ ಸಂಬಂಧದ ವಿಚಾರವನ್ನೂ ವೀರಶೈವರ ವಚನ ಶಾಸ್ತ್ರದಲ್ಲಿ ಬರುವ ವಿಚಾರಗಳೊಡನೆ ಹೋಲಿಸಿ ನೋಡುವುದು.

"ಅವೆಹೌಲ್ಯನು, ಅಪ್ರಮಾಣನು, ಅಗೋಚರ ಲಿಂಗವು, ಆದಿ ಮಧ್ಯಾಂತ ವಿಲ್ಲದ ಲಿಂಗವು, ಸ್ವತಂತ್ರ ಲಿಂಗವು, ನಿತ್ಯ ನಿರ್ಮಲ ಲಿಂಗವು ಅಯೋನಿ ಸಂಭವನಯ್ಯ ನಮ್ಮ ಕೂಡಲ ಸಂಗಮದೇವಾ—

"ಸಿಲೆಯೊಳಗಿನ ಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ, ಬೀಜದೊಳಗಣ ವೃಕ್ಷದಂತೆ, ಶಬ್ದದೊಳಗಣ ನಿಶ್ಶಬ್ದದಂತೆ ಗುಹೇಶ್ವರಾ ನಿಮ್ಮ ಶರಣ ಸಂಬಂಧ

ಇವುಗಳೊಡನೆ "ಪಂಚದಶೀ"ಯಲ್ಲಿ ಶ್ರೀ ವಿದ್ಯಾರಣ್ಯರೂ ಶ್ರೀ ಭಾರತೀ ತೀರ್ಥ ಮುನಿಗಳೂ ಸಾರಿರುವ "ದೇಹಾತ್ಮತ್ವ ವಿಪರ್ಯಾಸಂ ನ ಕದಾಚಿದ್ಬ ಜಾಮ್ಯಹವಮ್" ಎಂಬ ಉಕ್ತಿಯನ್ನೂ ಗಮನಿಸಬೇಕು. ಅಂದರೆ ಚಿನ್ಮಯ ಚಿಂತಾಮಣಿಯ ಅರ್ಥ ವೈಶಾಲ್ಯವೂ, ಹಿರಿಮೆಯೂ ಗೊತ್ತಾಗುವುದು. ಅದರೊಡನೆ ಕನ್ನಡ ದರ್ಶನಶಾಸ್ತ್ರ ಗ್ರಂಥಗಳಲ್ಲಿ ಇದಕ್ಕೊಂದು ವಿಶಿಷ್ಟವಾದ-ಶ್ರೇಷ್ಠವಾದ ಸ್ಥಾನವಿರುವದೆಂಬ ವಿಚಾರವೂ ಹೊಳೆಯುವದು.

ಇನ್ನೂ ಸ್ವಲ್ಪ ಸುತ್ತಲೂ ದೃಷ್ಟಿ ಹರಿಯಿಸಿ ನೋಡಬೇಕೆಂದಿದ್ದರೆ ಜೈನರು ನಿತ್ಯಾಚರಣೆಯಲ್ಲಿ ತರಲು ಪ್ರಯತ್ನಿಸುತ್ತಿರುವ-ಭಗವಾನ್ ಮಹಾ ವೀರನು ಬೋಧಿಸಿದ-ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಈ ಪಂಚಮಹಾವ್ರತಗಳನ್ನು ಗಮನಿಸಬೇಕು. ಈ ವ್ರತಗಳನ್ನು ಪಾಲಿಸುವ ಜನರಿಗೆ ಕಲ್ಯಾಣಕೀರ್ತಿಯು 'ಯಮಿ'ಗಳೆಂದು ಕರೆಯುತ್ತಾನೆ. ಇದೇ ಮಾತನ್ನು ಯೋಗಿವರ ಪಾತಂಜಲಿಯು ತನ್ನ ಯೋಗ ಸೂತ್ರದಲ್ಲಿ,

ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾ ಪರಿಗ್ರಹಾ ಯಮಾಃ ॥
(೨ನೆಯ ಪಾದ, ೩೦)

'ಯಮ'ದ ಲಕ್ಷಣವೆಂದು ಹೀಗೆ ವಿವರಿಸಿದ್ದಾನೆ. ಇದೇ ವಿವರಣೆಯನ್ನು ಮಹಾತ್ಮಾ ಬಸವಣ್ಣನವರು ಸಾರಿದ "ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ" ಎಂಬ ವಚನದಲ್ಲಿಯೂ ಕಾಣುತ್ತೇವೆ.

ಹೀಗೆ ಕಲ್ಯಾಣಕೀರ್ತಿಯ ಅಮರ ವಾಣಿಯು ಭಾರತೀಯರ ಅಧ್ಯಾತ್ಮ ರಸಗಂಗೆಯಾಗಿದೆ. ವೈದಿಕ, ಬೌದ್ಧ, ವೀರಶೈವ ಮೊದಲಾದ ಮುಖ್ಯ ಮತಗಳ ತಿರುಳು ಇದರಲ್ಲಿ ಅಡಕವಾಗಿದೆ. ಕ್ರೈಸ್ತ, ಇಸ್ಲಾಂ ಧರ್ಮಗಳೂ ಈ ಗಂಗಾ ಪ್ರವಾಹದಲ್ಲಿ ಮೀಯದೆ ನಿಂತಿಲ್ಲ. ಆದುದರಿಂದ ಚಿನ್ಮಯ ಚಿಂತಾಮಣಿ ಯೊಂದು ವಿಶ್ವಧರ್ಮದರ್ಶನದ ಶಿರೋಮಣಿಯಾಗಿ ಯಾವಾಗಲೂ ನಿಲ್ಲುವ ದೆಂಬುದರಲ್ಲಿ ಸಂಶಯವಿಲ್ಲ.

ಇನ್ನು ಕವಿಚರಿತ್ರೆಕಾರರು ಚಿನ್ಮಯ ಚಿಂತಾಮಣಿಯು ಸಿಂಹರಾಜ (೧೬೫೦) ನಿಂದ ಬರೆಯಲ್ಪಟ್ಟಿದೆಯೆಂದೂ, ಅದಕ್ಕೆ 'ಹರದ ನೀತಿ' ಎಂಬ ಇನ್ನೊಂದು ಹೆಸರೂ ಉಂಟೆಂದು ಸೂಚಿಸುವರು. ಆದರೆ ಸಿಂಹರಾಜನ 'ಹರದ ನೀತಿ'ಯು ಚಿನ್ಮಯ ಚಿಂತಾಮಣಿಯಾಗಿರಲಾರದು. ಏಕಂದರೆ ಹರದ

ನೀತಿಯು ಕಂದದಲ್ಲಿ ಬರೆಯಲ್ಪಟ್ಟ ೧೦೦ ಶ್ಲೋಕಗಳ ಗ್ರಂಥವು. ಚಿನ್ಮಯ ಚಿಂತಾಮಣಿಯು ವಿಶೇಷತರದ ಚೌಪದಿಯಲ್ಲಿದೆ. ಮೇಲಾಗಿ ೧೦೫ ಪದ್ಯಗಳೂ ಕೊನೆಗೆ ೧ ಕಂದವೂ ಉಳ್ಳುದು. ಅಲ್ಲದೆ ಎರಡರಲ್ಲಿಯ ವಿಚಾರ ಸರಣಿಗಳೂ ಬೇರೆ ಬೇರೆಯಾಗಿವೆ.

ಚಿನ್ಮಯ ಚಿಂತಾಮಣಿಯೊಳಗಿನ ವಿಚಾರಗಳನ್ನು ಕಲ್ಯಾಣಕೀರ್ತಿಯು ಇನ್ನುಳಿದ ಜಿನಸ್ತುತಿ (ಆನಂದ ಕಂದಳಿ) ಚಾರುತತ್ವಪದಾಷ್ಟಕ, ಆಧ್ಯಾತ್ಮಾಷ್ಟಕ, ಅನುಪ್ರೇಕ್ಷೆಯೇ ಮೊದಲಾದ ಕೃತಿಗಳಲ್ಲಿಯ ವಿಚಾರಗಳೊಡನೆ ಈ ರೀತಿ ಹೋಲಿಸಿಯೂ ನೋಡಬಹುದು.

**ಚಿನ್ಮಯ ಚಿಂತಾಮಣಿ**

ಜಡತೆಯ ದೆಶೆಯಿಂ ಮಾನಸದ
ಬಿಡದಾಸ್ರವಗಳು ಬಂದು ॥
ತೊಡಕಿಸಿ ನಿನ್ನನು ಕಟ್ಟುವವು
ಕೆಡಸಿದೊಡಮಲನು ನೀನು ॥೨೫॥

........................ಸಮರಸಗರ್ಭಿ
ತವಾಗಿಹುದು । ಯಮಿಜನ
ಕಿದು.................. ॥ ೫೨ ॥

ಪಳುಕಿನ ಶಿಲೆಯೊಳು ನಿರ್ಮಿಸಿದ
ಸಲೆಜಿನರಾಕೃತಿಯಂತೆ ॥
ಒಲಿದು ನಿರೀಕ್ಷಿಸಿ ನಿನ್ನೊಳಗೆ
ಬೆಳಗೊಂದಪ್ಪುದು ನೋಡು ॥೫೮॥

ಪಡೆದಾನಂದದಿ ತಣಿದಿಹನು
ಬಿಡುವನು ತನು ಮೊದಲಾಗಿ ॥
ಪರಮಸಮಾಧಿ ಸರೋವರದ
ಸುರುಚಿರ ತಟದೊಳು ಮಿಂದು ॥೬೩॥

**ಆನಂದ ಕಂದಳಿ***

ಕುದಿದು ಪರಿಗ್ರಹ ಭರದಿಂ ।
ದುದಿತಾಸ್ರವದಿಂದ ಬಂಧಸ್ಥಿತಿಯಂ ।
ಮುದದಿಂ ಖಂಡಿಸಿ ಚಿನ್ಮಯ ।
ಪದವಿಧಿಯಂ ಬಿಡದೆ ನೆನೆವುದೆಂದೆನಗ
ಹುದೋ ॥ ೨೨ ॥
ಸಮರಸದಿಂ ತನಿದಾಡುವ
ಯಮಿಜನಮಂ ॥ ೨೦ ॥
ಶಿಲೆಯೊಳ್ಬಿದ್ರಿಸಿ ತೋಡಿದ ।
ವಿಲಸಜ್ಜಿನಚಾರುಬಿಂಬದಂತೆ
ಬರೆದದಂ ॥
ನೆಲೆಗೊಳ್ವನಂದ ಮಿಂದೆಂ ।
ದೊಲಿದೀಕ್ಷಿಸಿ ಬಿಡದೆ ನೆನೆವುದು....॥೧೬॥
ಪರಮಾನಂದ ಸುಧಾಬ್ಧಿಯ ।
ವರತೀರ್ಥಸ್ನಾನದಿಂದ ನೈರ್ಮಲ್ಯ
ಮುಮ ॥
ವಿರಚಿಸಿದೆನ್ನಾಕೃತಿಯಂ ।
ಒಳಮೂರುತಿಯೋಳ್ ಬಿಡದೆನೆವುದೆನ
ಗೆಂದಹುದೋ ॥ ೧೩ ॥

* ವೆ. ಲೋಕನಾಥ ಶಾಸ್ತ್ರಿ. (ಮೂಡಬಿದರಿ) ಯವರು ಸಂಪಾದಿಸಿದ 'ಆಧ್ಯಾತ್ಮ ರಸ ಮಂಜರಿ'ಯಲ್ಲಿ ಕಾಣಬಹುದು.

ಭಾವಿಸು ನಿನ್ನನು ನಿನ್ನೊಳಗೆ ||೧೮||
ಮರೆವುದು ವಿಷಯ ಸುಖಂ
ಗಳನು................ ||೧೯||

ಜಾತಿ ಕುಲಂಗಳು ನಿನಗಿಲ್ಲ
ಪ್ರೀತಿವಿಶಾದಗಳಿಲ್ಲ ||
ವೀತಶರೀರಗೆ ಹೆಸರಿಲ್ಲ
ಮಾತಿಗೆ ಗೋಚರನಲ್ಲ ||೨೦||

ದೇಹಕಲತ್ರಾದಿಕದಲ್ಲಿ
ಮೋಹವ ಮಾಡುವ ಮೂಢ ||೧||

ನೆನೆಯುನು ಪ್ರೇಕ್ಷೆಯು ಹನ್ನೆರಡು
..................................................

ಪರಿಪರಿಯಂಗದ ಕಾಂತಿ
ತರುಣಾಯುಷ್ಯದನಿತ್ಯತೆಯು
ಸುರಪತಿ ಕಾರ್ಮುಕದಂತೆ
|| ೧೬-೧೭ ||

## ಚಾರುತತ್ವಪದಾಷ್ಟಕ

ನಿನ್ನೊಳು ನಿನ್ನ ಭಾವಿಸಿ || ೨ ||
ಹಿಂದೆ ಬಂದಖಿಳೇಂದ್ರಿಯಂಗಳ ಸೌಖ್ಯ
ಮಂ ವಿಷದಂದ ದಿಂ....ಭಾವಿಸು || ೪ ||

........ಪ್ರಿತಿರೋಷ ವಿಶಾದ ವಿಸ್ಮಯ
ಮಾಯ ಮೋಹ ವಿಕಲ್ಪದಿಂ| ಜಾತಿಯಿಂ
ಕುಲಕೋಟಿಯಿಂ ಬಹುಲಿಂಗದಿಂದತಿ
ದೂರನಂ | ವೀತಭೀತನ ಭಾವಿಸು ||೬||

## ಅಧ್ಯಾತ್ಮ ಪದಾಷ್ಟಕ

ರಾಗಮೇಕೆ ಕಲತ್ರ ಪುತ್ರರ ||೨||

## ಅನುಪ್ರೇಕ್ಷೆ

ವಿಲಸದಿಂದ್ರಿಯ ಪಾಟವಂ |
ನೆಲಸಿದಂಗದ ಸೌಷ್ಠವಂ ||
ತೊಳಪ ಮಿಂಚಿನ ರೀತಿಯಿಂ |
ತೊಲಗಿ ಹೋಹುದು ಜೀವನೇ ||

ಈ ಹೋಲಿಕೆಗಳನ್ನೆಲ್ಲ ಲಕ್ಷಿಸಿದರೆ ಚಿನ್ಮಯ ಚಿಂತಾಮಣಿಯು ಸಿಂಹರಾಜ ಕೃತವಿರದೆ ಕಲ್ಯಾಣಕೀರ್ತಿವಿರಚಿತವೇ ಇರುವುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಅಲ್ಲದೆ ಹರದ ನೀತಿಯಲ್ಲಿ ಬರುವ :

ಅಲ್ಲದ ಸತಿಯೊಡನಾಟಂ |
ತಲ್ಲಣಿಸುವ ಭಯದ ಬಟ್ಟೆ ಕಳ್ಳರ ಸಂಗಂ ||
ಬಲ್ಲಿದರೊಡನೆ ವಿರೋಧಂ |
ಕೊಲ್ಲದೆ ಮಾಣ್ಬುವೆ ಸುಕವಿಕರ್ಣಾಭರಣಾ ||

ಈ ವ್ಯವಹಾರ ನೀತಿಬೋಧೆಗೂ ಕಲ್ಯಾಣಕೀರ್ತಿಯು ಬೋಧಿಸುವ ಆತ್ಮ ಜ್ಞಾನಕ್ಕೂ ನೆಲಮುಗಿಲುಗಳಷ್ಟು ಅಂತರವಿದೆ. ಅಲ್ಲದೆ ಚಿನ್ಮಯ

ಚಿಂತಾಮಣಿಯಲ್ಲಿ ಪ್ರಾಚೀನ ಭಾರತೀಯರ ಆಧ್ಯಾತ್ಮ ಸಾಧನೆಯ ಸಾರವೆಲ್ಲ ಮೂರ್ತೀಭವಿಸಿದ ಸಂಗತಿಯನ್ನೂ ನಾವು ಕಾಣುತ್ತೇವೆ.

**ಚಿನ್ಮಯ ಚಿಂತಾಮಣಿ**

....ದೇವನು ನಿಜತನುವೆಂಬಾ
ದೇವಾಲಯದೊಳಗಿರುತಿಹನು
ಭಾವಿಸಿ ಕಾಣಲುಬೇಕು ||೩೬||
ತರುಣನು ವೃದ್ಧನು ಬಾಲಕನು |
ಪುರುಷನು ಷಂಢನು ವೆಂದು ||
ತರುಣಿಯು ವೆಂಬೀ ಪರಿಣತೆಯಿಂ
ನಿರಘನು ಭಿನ್ನನು ನೀನು ||೬೯||
ಓರ್ವನೆ ಕರ್ಮವ ಮಾಡುವನು |
ಓರ್ವನೆ ದುಃಖವ ನುಂಬ ||
ಓರ್ವನೆ ಭವದೊಳು ತೊಳಲುವನು |
ಓರ್ವನೆ ಶಿವಸುಖದಲ್ಲಿ ||೧೯||

**ಅಧ್ಯಾತ್ಮ ಗ್ರಂಥಗಳು**

ದೇಹಾ ದೇವಲಿ ದೇವು ಜಿಣು ಜಿಣು,
ದೇವಲಿಹಿ ಣಿ ಎಇ ||
(ಯೋಗಸಾರ ೪೨)

ತರುಣಉ ವೂಢಉ ರೂಯಡಉ....
........ಪುರಿಸು ಣಉಂಸವು ಇತ್ಥಿಹಉ
[—ಪರಮಾತ್ಮ ಪ್ರಕಾಶ]

ಇಕ್ಕೋ ಸಂಚದಿ ಪುಣ್ಣಂ|
ಇಕ್ಕೋ ಭುಂಜೇದಿ ವಿವಿಹ ಸುರ
ಸೊಕ್ಖಂ |
ಇಕ್ಕೋ ಭವೇದಿ ಕಮ್ಮಂ|
ಇಕ್ಕೋ ವಿಯಾ ಪಾವ ಎ ಮೊಕ್ಖಂ ||೭೬||
[ಕಾರ್ತಿಕೇಯಾನುಪ್ರೇಕ್ಷೆ]

ಇವುಗಳಿಂದ ಕಲ್ಯಾಣ ಕೀರ್ತಿಯ ಆತ್ಮಿಕ ಬಲ, ಆಧ್ಯಾತ್ಮ, ತಪಸ್ಸುಗಳ ಕಲ್ಪನೆಯು ಬರಬಹುದು. ಚಿನ್ಮಯ ಚಿಂತಾಮಣಿಯ ಹಿನ್ನೆಲೆಯ ಮೇಲೆಯೂ ಬೆಳಕು ಬೀಳಬಹುದು.

ಇನ್ನು ಕವಿಗೆ ಶಾಸ್ತ್ರಾಭ್ಯಾಸದ ಜೊತೆಗೆ ಲೋಕಾನುಭವವೂ ತುಂಬ ಇದ್ದಿತು. ಜನತೆಯ ಡಂಭಾಚರಣೆಯನ್ನೂ ಆಚರಣೆಯಿಲ್ಲದ ಮಾತುಗಾರಿಕೆಯನ್ನೂ ನೋಡಿ, 'ಓದು ತಪಂಗಳು, ರೂಢಿಯ ಹೋಮ, ಫಲಗೊಡವು' 'ಸಾಕಿನ್ನು ರಚನೆಯ ವಚನಗಳು' ಎಂದು ಮೊದಲಾಗಿ ಕೆರಳಿದ್ದೂ ಉಂಟು. ಅದರಂತೆ 'ಬಿದುರು ವಸಂತದಲ್ಲಿ ಉದುರುವಂತೆ' ಇವೇ ಮೊದಲಾದ ಮಾತುಗಳಲ್ಲಿ ಕವಿಯ ಸೃಷ್ಟಿ ನಿರೀಕ್ಷಣೆಯು ಕಂಡುಬರುವದು. ಮೇಲಾಗಿ ಕಲ್ಯಾಣಕೀರ್ತಿಯು ಜೈನಶಾಸ್ತ್ರಗಳಲ್ಲಿ ಅಡಕವಾಗಿರುವ—ಸಾಮಾನ್ಯ ಜನಕ್ಕೆ ತಿಳಿಯದ—ಹಲವು ತಾತ್ವಿಕ ಮಾತುಗಳನ್ನು ದಿನದ ವ್ಯವಹಾರದ ಮಾತುಗಳಲ್ಲಿಯೇ 'ಬೆಳಗಿದ ದರ್ಪಣದೊಳಗೆಂತು ಪೊಳೆವುದು ತನ್ನಯ ರೂಪು....'

ಜಿನಪದ ನಖದೊಳಗೆ ಪೊಳೆವುದು ಮೂಜಗ' ಈ ರೀತಿ ಹೇಳಿದ್ದಾನೆ. ಪ್ರಾಚೀನ ಕವಿಗಳ ಕವಿ ಸಮಯಗಳನ್ನು ಬಳಸಿಕೊಳ್ಳುತ್ತಲೂ ನಡುನಡುವೆ ತನ್ನವೇ ಆದ ಅನುಭಾವಪೂರ್ಣವಾದ—ಹೋಲಿಕೆಗಳನ್ನು ಕೊಟ್ಟಿದ್ದನ್ನು 'ಮನವೆಂಬುದಕ ಕದಡದಿರೆ ಚಿನುಮಯನಲ್ಲಿಯೆ ತೋರ್ಕುಂ' 'ದಧಿ ಕಡಿದರೆ ಕೈಗಳಿಗೆ ಪೆಡಸಹುದು' ಇವೇ ಮೊದಲಾದ ಮಾತುಗಳಲ್ಲಿ ನಾವು ಕಾಣುತ್ತೇವೆ.

ಇದಲ್ಲದೆ ಕಲ್ಯಾಣಕೀರ್ತಿ ಪ್ರಗತಿಪರ ವಿಚಾರವುಳ್ಳವನು. ಹೊಸ ಕಾಲಕ್ಕೆ ಹೊಸವಿಚಾರ ಬೇಕು. ಹೊಸಯುಗದ ಮುಂದೆ ಬರುವ ಹೊಸ ಸಮಸ್ಯೆಗಳಿಗೆ ಹೊಸ ಪರಿಹಾರ ಹೇಳಲುಬೇಕು. ಎಂಬ ಭಾವವೂ ಅಲ್ಲಲ್ಲಿ ಹೊರ ಹೊಮ್ಮದೆ ಇಲ್ಲ. 'ಹೊಸ ಮಂತ್ರದ ಜಪದಿಂದ ಭೂತಗಳೋಡುವವು' ಎಂದು ಸಾರುವನು.

ಕವಿಗೆ ತನ್ನ ತಪಸ್ಸು, ಲೋಕಾನುಭವ, ಶಾಸ್ತ್ರ ಪರಿಚಯ, ಪ್ರಗತಿಪರ ವಿಚಾರ, ಅನುಭಾವ, ಇವೆಲ್ಲವುಗಳಿಂದ ಒಂದು ಆತ್ಮವಿಶ್ವಾಸವುಂಟಾಗಿದೆ. ಆದರಿಂದ ತನ್ನ ಗ್ರಂಥ—ಪ್ರಣಿಹಿತ ಚಿನ್ಮಯ ಚಿಂತಾಮಣಿ—ಮಣಿಯದೆ ಜಗದೊಳು ನೆಲಸಲಿ ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ, ಅದನ್ನು ಸಾರ್ಥಕಗೊಳಿಸಿದ್ದಾನೆ.

## ಕವಿಯ ಉಳಿದ ಕೃತಿಗಳು ಮತ್ತು ಶೈಲಿ

೧ ಜ್ಞಾನಚಂದ್ರಾಭ್ಯುದಯ :

ಇದು ವಾರ್ಧಿಕ, ಭಾಮಿನಿ, ಪರಿವರ್ಧಿನಿ ಈ ಷಟ್ಪದಿಗಳಲ್ಲಿದೆ. ಒಟ್ಟು ೯೦೮ ಪದ್ಯಗಳಿವೆ ಸಂಧಿಗಳಾಗಿ ವಿಭಾಗಿಸಿಲ್ಲ. ಇದರಲ್ಲಿ ಜ್ಞಾನಚಂದ್ರ ಎಂಬ ರಾಜನು ತಪಸ್ಸುಮಾಡಿ ಮುಕ್ತಿಯನ್ನು ಪಡೆದ ಕಥೆ ಹೇಳಿದೆ. ಆದರಿಂದ ಇದಕ್ಕೆ ಜ್ಞಾನಚಂದ್ರಷಟ್ಪದಿ ಎಂದೂ ಹೆಸರುಂಟು. ಗ್ರಂಥಾವತಾರದಲ್ಲಿ ಮಹಾವೀರ ಜಿನನಸ್ತುತಿಯಿದೆ.

೨ ಕಾಮನ ಕಥೆ :

ಇದು ಸಾಂಗತ್ಯದಲ್ಲಿದೆ. ೪ ಸಂಧಿ, ೩೩೧ ಪದ್ಯಗಳು. ಅಲ್ಲಲ್ಲಿ ಕಂದ

ಷಟ್ಪದಿ ವಚನಗಳೂ ಇವೆ. ಇದರಲ್ಲಿ ಮೊದಲು ನೇಮಿನಾಥ ತೀರ್ಥಂಕರ ರನ್ನೂ ಬಳಿಕ ಸರಸ್ವತಿ, ಜಿನಮುನಿಗಳು, ತನ್ನ ಗುರು ಲಲಿತಕೀರ್ತಿ ಇವರು ಗಳನ್ನು ಸ್ತುತಿಸಿದ್ದಾನೆ. ಅನಂತರ ಜೈನಮತಾನುಸಾರವಾಗಿ ಕಾಮನಕಥೆ ಯನ್ನು ಹೇಳಿರುವನು.

೩ ಅನುಪ್ರೇಕ್ಷೆ:

ಇದು ೭೪ ಪದ್ಯಗಳುಳ್ಳ ಚಿಕ್ಕ ಗ್ರಂಥ. ಕುಂದಕುಂದಾಚಾರ್ಯರ ಗಾಹೆಯ ಅರ್ಥವನ್ನು ಭಾವಿಸಿ ಈ ಗ್ರಂಥವನ್ನು ಬರೆದಂತೆ ಕವಿ ಹೇಳುತ್ತಾನೆ.

೪ ಜಿನಸ್ತುತಿ :

ಇಪ್ಪತ್ತೇಳು ಕಂದಗಳ ಜಿನಸ್ತುತಿಯಿದು. ಇದಕ್ಕೆ 'ಆನಂದ ಕಂದಳಿ' ಎಂದೂ ಇನ್ನೊಂದು ಹೆಸರು. ಇದರಲ್ಲಿಯೂ ಅಧ್ಯಾತ್ಮ ವಿಚಾರ ಅಲ್ಲಲ್ಲಿ ಒಡಮೂಡಿದೆ.

ಇವಲ್ಲದೆ ತತ್ವಭೇದಾಷ್ಟಕ, ಅಘಾಂತಕಾಷ್ಟಕ ಮೊದಲಾದ ಅಷ್ಟಕಗಳೂ ಇವೆ. ಮೇಲಾಗಿ ಕಲ್ಯಾಣಕೀರ್ತಿಯು 'ಸಿದ್ಧರಾಶಿ' ಎಂಬ ಗ್ರಂಥವನ್ನೂ ಬರೆದಂತೆ ತೋರುತ್ತದೆ.

'ಜ್ಞಾನಚಂದ್ರಾಭ್ಯುದಯ,' 'ಕಾಮನ ಕಥೆ' 'ಜಿನಸ್ತುತಿ' ಮೊದ ಲಾದ ಕಾವ್ಯಗಳನ್ನು ಪಠಿಸಿ, ಕಥಾರಚನೆ, ಪಾತ್ರಪರಿಪುಷ್ಟಿ, ಭಕ್ತಿಭಾವ ಮುಂತಾದ ವಿಷಯಗಳ ಕಡೆಗೆ ಲಕ್ಷ್ಯಹಾಕಿ, ವಿಷಯ ವಿವರಣೆಯ ರೀತಿ ಯನ್ನು ಗಮನಿಸಿದ ಪಕ್ಷದಲ್ಲಿ ಎರಡು ಪ್ರಶ್ನೆಗಳು ಉದ್ಭವಿಸುವವು. ಕಲ್ಯಾಣ ಕೀರ್ತಿಯ ಕೃತಿಗಳಿಗೆ ಒಂದು ನಿರ್ದಿಷ್ಟವಾದ ಶೈಲಿಯುಂಟೆ? ಅದರ ಲಕ್ಷಣ ಗಳೇನು? ಈ ಪ್ರಶ್ನೆಗಳಿಗೆ ಉತ್ತರಂ ಹೇಳುವುದು ಅಷ್ಟು ಸುಲಭವಲ್ಲ. ಜ್ಞಾನಚಂದ್ರಾಭ್ಯುದಯದ

ಅರುಣ ಮಣಿದ್ಯುತಿರದನಚ್ಛದನೆಯ ।
ಮರಕತ ಮಣಿರುಚಿ ನಿಭತನುಯಷ್ಟಿಯು ।
ಹರಿನೀಲದ ಕಿರಣಾಂಕುರ ಸನ್ನಿಭ ಕುಂತಳಭಾಸುರೆಯು ॥

ಇಂತಹ ಅನೇಕ ಪದ್ಯಗಳನ್ನು ನಿರೀಕ್ಷಿಸಿದಲ್ಲಿ ಕವಿಯ ಶೈಲಿಯು ರಮ್ಯಮನೋಹರವೂ ಗಂಭೀರವೂ ಪಾಂಡಿತ್ಯಪೂರ್ಣವೂ ಆಗಿರುವುದನ್ನು ಕಾಣುತ್ತೇವೆ. ಇದರ ಜೊತೆಗೆ 'ಚಿನ್ಮಯ ಚಿಂತಾಮಣಿ'ಯ ಶೈಲಿಯನ್ನು ಹೋಲಿಸಿ ನೋಡಿದರೆ ಅದು ಅಷ್ಟು ಎದ್ದು ಕಾಣದು. ಜ್ಞಾನಚಂದ್ರಾಭ್ಯುದಯುದ ಕರ್ತೃವಿನ ಶೈಲಿಯೇ ಇದು? ಎಂದೆನಿಸುವುದು. ಆದರೂ ಅಲ್ಲಲ್ಲಿ ಜೀವಂತ ಕನ್ನಡದ ಹೊಳಪು ಕಾಣುತ್ತಲಿದೆ. ಇದನ್ನೆಲ್ಲ ಅವಲೋಕಿಸಿದರೆ ಈ ಕವಿಯ ಶೈಲಿಯ ಬಗ್ಗೆ ಇಷ್ಟು ಹೇಳಬಹುದು: ಪಂಡಿತ ಪಾಮರರಿಬ್ಬರನ್ನೂ ತಲೆದೂಗಿಸುವ ಶೈಲಿಯಿವನದು. ಅವರವರಿಗೆ ತಕ್ಕಂತೆ-ತಿಳಿಯುವಂತೆ ಹೇಳುವ ಬಲ್ಮೆ ಇವನ ಶೈಲಿಯಲ್ಲಿದೆ.

ಜನತೆಯ ಭಾಷೆಯಲ್ಲಿ ಗ್ರಂಥಗಳನ್ನು ಬರೆದು, ಜಿನಾಗಮವನ್ನು 'ಸಮಸ್ತ ಭೂತಳಕೆ ಬೆಳಗುವಂತೆ' ಮಾಡುವೆನೆಂದು ಹೊರಟ ಪಂಪ ಮಹಾಕವಿಯೂ ಅವನ ಹೆಜ್ಜೆಯನ್ನೇ ತುಳಿದ ಪೊನ್ನ ರನ್ನ ನಾಗಚಂದ್ರರೇ ಮೊದಲಾದವರೂ ಚಂಪೂ ಕಾವ್ಯಗಳಲ್ಲಿ ಗಂಭೀರ ಶೈಲಿಯನ್ನು ಬಳಸಿದುದರಿಂದ ಜಿನಾಗಮವು ವಿದ್ವಜ್ಜನರನ್ನಷ್ಟೇ ಆಶ್ರಯಿಸಿಕೊಂಡು ನಿಂತಿದ್ದಿತು. ಅನಂತನಾಥ ಪುರಾಣದಲ್ಲಿ ಜನ್ನನು ಸಾರುವ:

ಕರಣ ತ್ರಯದಿ ನನಂತಾ।
ನುರೋಧಮಂ ಕ್ರೋಧಮಾನ ಮಾಯಾ ಲೋಭೋ॥
ತ್ಕರಮಂ ದುರಿತ ತಮಃಖರ।
ಕರನುಳಿದೀರಾರರೊಳ್ ವಿಸಂಯೋಜಿಸಿದಂ ॥ ೯, ೧೧೫ ॥

ತಾತ್ವಿಕ ನುಡಿಗಳನ್ನೇ ಕನ್ನಡ ಸಾಹಿತ್ಯ, ಶೈಲಿಗಳಲ್ಲಿಯೇ ಕ್ರಾಂತಿಯನ್ನೆಸಗಿದ ಶ್ರೀ ಬಸವಣ್ಣನವರು.

"ವಚನದ ಹುಸಿ ನುಸುಳೆಂತು ಮಾಬುದೆನ್ನ? ಮನದ ಮರ್ಕಟತನವೆಂತು ಮಾಬುದೆನ್ನ? ಹೃದಯಕಲ್ಮಷವೆಂತು ಮಾಬುದೆನ್ನ? ಕಾಯವಿಕಾರಕ್ಕೆ ತೋರಿಸಲುವಾದೆನು. ನಿನಗಿದು ವಿಧಿಯೇ ಕೂಡಲ ಸಂಗಮದೇವಾ?"

ಎಂದು ಮೊದಲಾಗಿ ಹೇಳಿ ಸಾಮಾನ್ಯ ಜನತೆಯ ವರೆಗೂ ಒಯ್ದು ಮುಟ್ಟಿಸಿದರು. ಇದನ್ನೇ ಮುಂದೆ ದಾಸಕೂಟದವರು

"ಮನಶುದ್ಧಿಯಿಲ್ಲದವರಿಗೆ ಮಂತ್ರದ ಫಲವೇನು ?"
"ಹುಚ್ಚು ಕುನ್ನಿ ಮನವೆ ಕಚ್ಚುಕದ ತನವನ್ನು ಬಿಟ್ಟು,
ನವರಂಧ್ರಗಳ ಕಟ್ಟು, ನೀ ನಡೆವದಾರಿಯ ಮುಟ್ಟು,
ಕವಿದ ಕಾಮ ಕ್ರೋಧಗಳ ನಟ್ಟು."

"ಮನವೆನ್ನ ಮಾತು ಕೇಳದು ಮಂದ ಜ್ಞಾನದಿ, ತನುವಿನಾಶೆಯು ಬಿಡಲೊಲ್ಲದು, ದೇಹ ಸಂಬಂಧಿಗಳಾದ ಐವರು ಮೋಹಪಾಶದಿ ಕಟ್ಟಿ ಬಿಗಿದಿಹರಯ್ಯ, ನೇಹವು ಅನಿತ್ಯನೆಂಬುವ ಗುರುತರಿಯದೆ ಮಾಯ ಪ್ರಪಂಚವೆಂಬುದು ಬದ್ಧವಾಗಿದೆ."

ಎಂದು ಸುಲಭನುಡಿಯಲ್ಲಿ ಹಾಡಿ ಮನೆಮನೆಗೂ ಒಯ್ದು ಮುಟ್ಟಿಸಿದರು.

ಹೀಗೆ ಶೈಲಿಯ ಸುಲಭತೆಯಿಂದಾಗುವ ತತ್ವ ಬೋಧದ ಪ್ರಸಾರದ ಸುಲಭತೆಯನ್ನರಿತು ಕಲ್ಯಾಣಕೀರ್ತಿಯವರು ಚಿನ್ಮಯ ಚಿಂತಾಮಣಿಯಲ್ಲಿ ಇಂತಹ ಜಾನಪದ ಶೈಲಿಯನ್ನು ಬಳಸಿ, ಜೈನ ಕವಿಗಳಿಗೆ ಮಾರ್ಗದರ್ಶಕರಾದರು. ವಚನಕಾರರ ದಾಸಕೂಟದವರ ಶೈಲಿಯನ್ನು ಅನುಸರಿಸಿ, ಜೈನ ಕವಿಗಳು ಮಾಡಿದ ತಪ್ಪನ್ನು ತಿದ್ದಿಕೊಂಡರು. ಈ ಶೈಲಿಯು ಅತ್ಯುಚ್ಚ ಶಿಖರಕ್ಕೆ ಮುಟ್ಟಿದ್ದನ್ನು ಮುಂದೆ ರತ್ನಾಕರವರ್ಣಿಯ ಭರತೇಶ ವೈಭವದಲ್ಲಿ ನಾವು ಕಾಣಬಹುದು.

ಕಲ್ಯಾಣಕೀರ್ತಿಯು ಶೈಲಿಯಲ್ಲಿ ಸುಲಭತೆಯನ್ನು ತಂದುಕೊಂಡಂತೆ ಛಂದಸ್ಸಿನಲ್ಲಿಯೂ ಹೊಸ ಹೊಸ ಪ್ರಯೋಗಗಳನ್ನು ಮಾಡಿದ್ದಾನೆ. ಈ ಕೃತಿಯಲ್ಲಿ ಈತನು ರಚಿಸಿಕೊಂಡ ವೃತ್ತವು ಕನ್ನಡ ಸಾಹಿತ್ಯದಲ್ಲಿಯೇ ಹೊಸ ಮಾದರಿಯದು ಪರಿವರ್ಧಿನಿ ಷಟ್ಪದಿಯ ಕೊನೆಯ ಚರಣವನ್ನು ಹಾಡಲಿಕ್ಕೆ ಅನುಕೂಲವಾಗುವಂತೆ ಮಾರ್ಪಡಿಸಿಕೊಂಡು, ಅದನ್ನು ಹಂಚಿ ಎರಡು ಚರಣಗಳನ್ನಾಗಿ ಮಾಡಿಕೊಂಡಿದ್ದಾನೆ. ಈ ರೀತಿ ಸಿದ್ಧ ಮಾಡಿಕೊಂಡ ಪರಿವರ್ಧಿನಿಯ ಚರಣಗಳಿಂದ ಇಲ್ಲಿಯ ಚೌಪದಿ ರೂಪುಗೊಂಡಿದೆ. ಇದರ ಮೊದಲನೆಯ ಪಾದದಲ್ಲಿ ನಾಲ್ಕು ನಾಲ್ಕು ಮಾತ್ರೆಯ ಮೂರು ಗಣಗಳೂ ಮೇಲೊಂದು ಮಾತ್ರೆಯೂ ಎರಡನೆಯ ಚರಣದಲ್ಲಿ ನಾಲ್ಕು ಮಾತ್ರೆಗಳ ಎರಡು ಗಣಗಳೂ

ಮೇಲೆ ಮೂರು ಮಾತ್ರೆಯ ಗಣವೂ ಇವೆ. ಇದರಂತೆಯೇ ಇನ್ನೆರಡು ಸಾಲುಗಳು. ಈ ಚೌಪದಿಯನ್ನು ಆದಿ ತಾಳದಲ್ಲಿ ಸುಂದರವಾಗಿ ಹಾಡಬಹುದು.

ಇವರಂತೆಯೇ ಈತನು ಬರೆದ 'ಅನುಪ್ರೇಕ್ಷೆ' ಯಲ್ಲಿಯ ಛಂದಸ್ಸೂ ಹೊಸ ಮಾದರಿಯದಾಗಿದೆ. ಅಲ್ಲಿ ಭೋಗ ಷಟ್ಪದಿಯ ಮೊದಲ ಪಾದಗಳನ್ನೇ ನಾಲ್ಕು ಸಲ ಇಟ್ಟು, ಚೌಪದಿಯನ್ನು ರಚಿಸಿಕೊಂಡುದನ್ನು ನಾವು ಕಾಣುತ್ತೇವೆ. ಮಾದರಿಗಾಗಿ

ವಿಲಸದಿಂದ್ರಿಯ ಪಾಟವಂ।<br>
ನೆಲಸಿದಂಗದ ಸೌಷ್ಠವಂ ॥<br>
ತೊಳಪ ಮಿಂಚಿನ ರೀತಿಯಿಂ।<br>
ತೊಲಗಿ ಹೋಹುದು ಜೀವನೇ ॥

ಎಂಬ ಪದ್ಯವನ್ನು ನಿರೀಕ್ಷಿಸಬಹುದು. ಇಲ್ಲಿಯ ಪದಗತಿಯು ಬಹು ಸುಂದರವಾಗಿದೆ. ಈ ರೀತಿ ಕಲ್ಯಾಣಕೀರ್ತಿಯು ಛಂದಸ್ಸಿನ ಬಳಕೆಯಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡಿದ್ದಾನೆ, ಯಶಸ್ಸನ್ನೂ ಪಡೆದಿದ್ದಾನೆ.

ಧಾರವಾಡ<br>
೧೬—೯—೧೯೪೬

—ಮಿರ್ಜಿ ಅಣ್ಣಾರಾಯ

# ಕೃತಜ್ಞತೆ

ಚಿನ್ಮಯ ಚಿಂತಾಮಣಿಯ ಛಂದಸ್ಸಿನ ವಿಷಯದಲ್ಲಿಯೂ, ಸಂಪಾದನ ಕಾರ್ಯದಲ್ಲಿಯೂ ಸೂಚನೆಗಳನ್ನಿತ್ತು ನೆರವು ನೀಡಿದ ಶ್ರೀಮಾನ್ ಬೆಟಗೇರಿ ಕೃಷ್ಣಶರ್ಮರಿಗೆ ನಾನು ವಂದಿಸದೆ ಇರಲಾರೆ.

ಕೊನೆಗೆ ಗ್ರಂಥ ಸಂಪಾದನೆಯ ಕಾರ್ಯದಲ್ಲಿ ಅನೇಕ ಸಲಹೆ ಸೂಚನೆಗಳನ್ನಿತ್ತೂ, ತಮ್ಮ 'ಹಳಗನ್ನಡ ಕಾವ್ಯಮಾಲೆ'ಯ ಪ್ರಥಮ ಕುಸುಮವೆಂದು ಪ್ರಕಟಿಸಿ ಬೆಳಕಿಗೆ ತಂದೂ ಉಪಕಾರ ಮಾಡಿದ **ಗೆ. ಶ್ರೀ. ಟಿ. ಕೆ. ಪಾಟೀಲ**ರಿಗೆ ನಾನು ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ.

ಧಾರವಾಡ<br>೧೬—೯—೧೯೪೬

**— ಮಿರ್ಜಿ ಅಣ್ಣಾರಾಯ**

ಶ್ರೀ ಕಲ್ಯಾಣಕೀರ್ತಿ ಕೃತ

# ಚಿನ್ಮಯ ಚಿಂತಾಮಣಿ

ಶ್ರೀ ಪುರುಷೋತ್ತಮರಚ್ಯುತರು
ರೂಪಾತೀತರು ಘೋರ
ಪಾಪವ ಖಂಡಿಸಿ ಪಾಲಿಸಲಿ
ಶ್ರೀಪರಮೇಶ್ವರರೆಮ್ಮ ॥೧॥

ಜ್ಞಾನ ಸಮುದ್ರದ ಮಧ್ಯದೊಳು
ಫೇನದ ಪಿಂಡದ ರೀತಿ
ಧ್ಯಾನಿಜನಾರ್ಚಿತ ಸಿದ್ಧರಿಗೆ
ನಾನಾಲೋಕವು ತೋರ್ಕುಂ ॥೨॥

---

ಭಗವಾನ್ ಜಿನೇಶ್ವರನು ಪುರುಷ ಶ್ರೇಷ್ಠನು. ಆ ಮುಕ್ತಸ್ಥಾನದಿಂದ ಎಂದೂ ಕದಲದಂಥವನು. ನಿರಾಕಾರನು. ಇಂತಹ ಪರಮೇಶ್ವರನು ನಮ್ಮ ಪಾಪವನ್ನು ಇಲ್ಲದಂತೆ ಮಾಡಿ ರಕ್ಷಿಸಲಿ. ॥೧॥

ಮಾನವನೇ ಶುದ್ಧಾಚರಣೆಯಿಂದ ದೇವತ್ವವನ್ನು ಪಡೆಯುವನೆಂಬ ಭಾವವು ಪುರುಷೋತ್ತಮ ಪದಪ್ರಯೋಗದಲ್ಲಿ ಧ್ವನಿತವಾಗಿದೆ. ವಿಶ್ವಧರ್ಮಕ್ಕೆ ಜೈನ ಧರ್ಮವು ಸಲ್ಲಿಸಿದ ಚಿರಂತನ ಕಾಣಿಕೆಗಳಲ್ಲಿ ಇದೊಂದು.

ಒಳ್ಳೆಯ ಜ್ಞಾನಿಗಳಿಂದ ಪೂಜ್ಯರಾದ ಸಿದ್ಧರಿಗೆ ಈ ಹಲವು ಲೋಕಗಳು ಜ್ಞಾನಸಮುದ್ರದೊಳಗಿನ ನೊರೆಯ ಪಿಂಡದಂತೆ ತೋರುವವು. ॥೨॥

ಸಿದ್ಧರಿಗೆ-- ಮುಕ್ತಾತ್ಮರಿಗೆ ಈ ಲೋಕವ್ಯವಹಾರವು ಬುರುಗಿನ ಗುರುಳೆಯಂತೆ ಅನಿತ್ಯವಾಗಿ ತೋರುವದು.

---

೧ ಜ್ಞಾನಿ (ಕ) ೨ ನಾನಾಲೋಕವು ಸಿದ್ಧರಿಗೆ ಏನುಳಿವಿಲ್ಲದೆ ತೋರ್ಕುಂ (ಅ)

ಹೆಚ್ಚುವ ಕುಂದುವ ಕಾರಣದಿಂ
ಬೆಚ್ಚಿಹರಲ್ಲಿಹರೆಲ್ಲ
ನೆಚ್ಚುತ ಭಾರವಿದೆಂಬುದರಿಂ
ದಚ್ಚಿಗವಿಲ್ಲವರಲ್ಲಿ ॥ ೩ ॥

ಚರಮಶರೀರ ಸಮಾನತೆಯಾ
ಧರಿಸಿ ನಿರಾಕುಲರಾಗಿ
ಇರುತಿಹರಧಿಕ ಸುಖಾಂಬುಧಿಯಾ
ಸುರಚಿರ ಮಧ್ಯದೊಳಿರ್ದು[1] ॥ ೪ ॥

ಮುನ್ನಾದ ಸಿದ್ಧರಿಗನವರತಂ
ಚನ್ನಾಗಾ [ ನಾ ] ನತನಾಗಿ
ಇನ್ನಪ್ಪವರನು ವಂದಿಪೆನು
ಉನ್ನತ ಮಹಿಮರ ನಾನು ॥ ೫ ॥

---

ಸಹಜ ಸಮ್ಯಗ್ದೃಷ್ಟಿಗಳು ಮುಕ್ತಾತ್ಮರು. ಹೆಚ್ಚುವುದು ಕಡಿಮೆಯಾಗುವುದು ಪುದ್ಗಲದ ( Matter ) ಸಹಜ ಸ್ವಭಾವವೆಂದರಿತವರು. ವ್ಯಥೆ ಇಲ್ಲದವರು. ॥ ೩ ॥

ಭವಬಂಧನಕ್ಕೆ ಕಾರಣವಾದುದು ಕರ್ಮ. ಆ ಕರ್ಮದಿಂದ ದೂರಾದವರೇ ಮುಕ್ತಾತ್ಮರು.

ಅಲ್ಲಿರುವವರು ಚರಮ (ಕೊನೆಯ) ಶರೀರ ಧಾರಿಗಳು. ಮನಸ್ವಾಸ್ಥ್ಯವುಳ್ಳವರು. ಶ್ರೇಷ್ಠವಾದ ಸುಖದ ಸಾಗರವನ್ನೇ ಪಡೆದಂಥವರು. ॥ ೪ ॥

ತದ್ಭವ ಮೋಕ್ಷಗಾಮಿಗಳ ಶರೀರವು ಚರಮ ಶರೀರವೆನಿಸುವದು. ನಾನು ಪೂರ್ವದಲ್ಲಿ ಆಗಿ ಹೋದಂತಹ, ಭವಿಷತ್ ಕಾಲದಲ್ಲಿ ಆಗುವಂತಹ, ಹೆಚ್ಚಿನ ಮಹಿಮೆಯುಳ್ಳಂತಹ ಎಲ್ಲ ಸಿದ್ಧರಿಗೆ ತ್ರಿಕಾಲದಲ್ಲಿಯೂ ವಂದಿಸುವೆ. ॥ ೫ ॥

---

೧ ಅರ್ಮ (ಅ)

ಧರಣಿಯೊಳೀಗಳು ವರ್ತಿಸುವಾ[1]
ನಿರುಪಮ ಸಿದ್ಧರಿಗಿನ್ನು[2]
ಕರಗಳ ಜೋಡಿಸಿ ನಮಿಸುವೆನು
ಸಿರಿದರ್ತಿಯ ಭರದಿಂದ ॥ ೬ ॥

ಚಾರುತರೋನ್ನತ ತೀರ್ಥಕರ
ಕಾರುಣ್ಯಾಮೃತ ಸಿಂಧು
ತಾರಾಧೀಶ್ವರ ವಂದಿಪೆನು
ಭೂರಿ ಮಹಾಗುಣದಿಂದ ॥ ೭ ॥

ಮುನಿಗಳ ಮೂವರ ನಿರುಪಮರ
ಅನುಪಮ ಪಾದಗಳಲ್ಲಿ
ಜನಿತಾನಂದದ ಭರದಿಂದ
ವಿನಮಿತ ಮಸ್ತಕನಪ್ಪೆಂ ॥ ೮ ॥

---

ಈಗ ಸದ್ಯಕ್ಕೆ ಭೂಮಿಯಲ್ಲಿರುವ ಉಪಮಾತೀತರಾದಂಥ ಸಿದ್ಧರಿಗೂ ಬಹಳ ಭಕ್ತಿಯಿಂದ ಕೈಗಳನ್ನು ಜೋಡಿಸಿ ನಮಸ್ಕಾರ ಮಾಡುವೆ. ॥ ೬ ॥

ತೀರ್ಥಂಕರರು ಅಸಾಮಾನ್ಯ ಒಪ್ಪಿತರು. (uncommonly agreeable) ದಯೆಯೆಂಬ ಅಮೃತದ ಸಮುದ್ರರು. ಚಂದ್ರನಂತೆ ಶಾಂತ ಸ್ವರೂಪರು. ಶುದ್ಧ ಸುವರ್ಣದಂತೆ ಮಹಾ ಗುಣವುಳ್ಳವರು. ಇಂಥವರಿಗೆ ನಮಸ್ಕಾರ ಮಾಡುವೆನು. ॥೭॥

ದಯೆಯು ಧರ್ಮದ ಮೂಲ. ದಯಾಸಾಗರನೂ ಶಾಂತಿ ಸುಗುಣಗಳುಳ್ಳವನೂ ಆದ ಮಾನವ ಶ್ರೇಷ್ಠನೇ ತೀರ್ಥಂಕರನು. ಮಾನವ ತನ್ನ ಆಚರಣೆಯಿಂದ ದೇವತ್ವವನ್ನು ಪಡೆಯಬಲ್ಲನೆಂದು ಬೋಧಿಸಿ, ಜೈನ ಧರ್ಮವು ಆದರ್ಶವಾದವನ್ನು ಎತ್ತಿಹಿಡಿಯುವದು.

(ಸಮಂತಭದ್ರ, ಪೂಜ್ಯಪಾದ, ಕವಿಪರಮೇಷ್ಠಿ)? ಈ ಮೂವರು ಮುನಿಗಳು—ಉಪಮಾತೀತರಾದಂಥವರು—ಪಾದಕಮಲಗಳಿಗೆ ಆನಂದದ ಭರದಿಂದ ನಾನು ನಮಸ್ಕಾರ ಮಾಡುವೆನು. ॥ ೮ ॥

---

೧ ಅನುವರ್ತಿಸು (ಅ) ೨ ಗಾನು (ಕ)

ಗುರುಗಳನೈವರ ಚರಣಗಳ
ಸರಸಿಜ ದಳ[1]ದಿಂದ ಮುಚ್ಚಿ
ಸ್ಮರಿಸುವೆ ನುತಿಸುವೆ ವಂದಿಪೆನು
ಕರಗಳ ಜೋಡಿಸಿ ನಿಂದು | ೯ ||

ಸಾವಿನ ನೋವನು ಖಂಡಿಸುವ
ಪಾವನ ಧರ್ಮವ ಬಿಟ್ಟು
ಜೀವನೆ! ತ್ರಿಭುವನ ಮಧ್ಯದೊಳು
ಕಾವೋಪಾಯಗಳಿಲ್ಲ || ೧೦ ||

---

ಅರಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸರ್ವಸಾಧುಗಳು ಈ ಐವರು ಗುರುಗಳ ಪಾದಗಳನ್ನು ಕಮಲದೊಳಗಿಡುವೆ. ಎದುರಿಗೆ ಕೈಜೋಡಿಸಿ ನಿಲ್ಲುವೆ. ನೆನೆಯುವೆ. ನಮಸ್ಕಾರ ಮಾಡುವೆ. || ೯ ||

ಮೋಕ್ಷ ಮಾರ್ಗದಲ್ಲಿ ಸ್ವತಃ ನಡೆದು, ನಡೆಯಿರೆಂದು ಬೋಧಿಸುವ ಪಂಚ ಪರಮೇಷ್ಠಿಗಳೆಲ್ಲರೂ ಗುರು ಸ್ವರೂಪರು, ಶ್ರೇಷ್ಠರು.

ಜೀವನೆ! ಸಾವಿನ ಸಂಕಟವನ್ನು ನಷ್ಟಗೊಳಿಸುವಂತಹ ಪವಿತ್ರವಾದ ಧರ್ಮವನ್ನು ಬಿಟ್ಟರೆ ಈ ಮೂರು ಲೋಕಗಳಲ್ಲಿ ನಿನ್ನನ್ನು ಕಾಯಲು ಬೇರೆ ಉಪಾಯಗಳು ಇಲ್ಲ. || ೧೦ ||

ಜೈನ ಸಿದ್ಧಾಂತದಲ್ಲಿ [ "ಭೂಭೂರ್ವ ಸ್ವಸ್ತ್ರಯಂ ಯತ್ರ" ಭೂಃ = ಪೃಥ್ವಿ ಲೋಕ, ಭುವಃ = ಅಧೋಲೋಕ, ಸ್ವಃ = ಊರ್ಧ್ವಲೋಕ ( ಯಶಸ್ತಿಲಕ ) ] ಈ ಮೂರೇ ಲೋಕಗಳನ್ನು ಹೇಳಿರುವರು. ಔಪನಿಷದ ಮತದಂತೆ ಹದಿನಾಲ್ಕು ಲೋಕಗಳನ್ನು ಜೈನರು ಒಪ್ಪುವದಿಲ್ಲ.

ಮರಣಾಧೀನನಾದ ಮಾನವನನ್ನು ಮುಕ್ತಗೊಳಿಸುವಂತಹದೇ ಪವಿತ್ರ ಧರ್ಮ.

---

೧ ದಳದೊಳಗಿಟ್ಟು (ಅ)

ದೇಹ ಕಳತ್ರಾದಿಕದಲ್ಲಿ
ಮೋಹವ ಮಾಡುವ ಮೂಢ
ಇಹವನುಳ್ಳತಿ ಮೋಹಿಗಳು
ಹೋಹರು ದುರ್ಗತಿಯಲ್ಲಿ[೧] ॥ ೧೧ ॥

ಕುವಲಯತನು ಪುತ್ರಾದಿಕದ
ತವಕದೊಳೊಂದುವ ಜೀವ
ಕವಿದಡೆ ವರ್ಣವಿಭೇದಗಳಿಂ-
ದವ ಬಹಿರಾತ್ಮನು ಕರ್ಮಿ ॥ ೧೨ ॥

ತನುವನು ಭೇದಿಸಿ ತನ್ನೊಳಗೇ
ವಿನುತ ಸಮಾಧಿಯೊಳಿರ್ದು
ಅನಘನ ಪರಮನ ನೋಡಿದನೆ
ನೆನೆವುದು ಪಂಡಿತನೆಂದು ॥ ೧೩ ॥

---

ದೇಹ, ಹೆಂಡರು ಮೊದಲಾದವುಗಳಲ್ಲಿ ಮೋಹಗೊಳ್ಳುವವನು ಮೂಢನು. ಇಹ ಲೋಕದಲ್ಲಿ ಅತಿಮೋಹಿಗಳಾದವರು ಕೆಟ್ಟ ಗತಿಗೆ ಹೋಗುವರು. ॥ ೧೧ ॥

ಪರಲೋಕದ ಕಡೆಗೆ ದೃಷ್ಟಿಯಿಟ್ಟು ಬಾಳಬೇಕು.

ಕೋಮಲವಾದ ಮೈಯು, ಮಕ್ಕಳು, ಮೊದಲಾದ ಕ್ಷಣಿಕ ವಿಷಯಗಳಲ್ಲಿಯೇ ಆತುರಗೊಂಡು ಮಗ್ನನಾಗಿರುವ ಜೀವವು ತನ್ನದು ಪರರದು ಎಂಬ ಭೇದಭಾವವನ್ನು ಕಲ್ಪಿಸುತ್ತ ಹೋಗುವದು. ಇದು ಬಹಿರಾತ್ಮನ ಲಕ್ಷಣ. ಕರ್ಮಪಂಕದಲ್ಲಿ ಮುಳುಗಿರುವುದರ ದ್ಯೋತಕ. ॥ ೧೨ ॥

ಕರ್ಮ ನಷ್ಟವಾಗಿ ಜೀವ ಮುಕ್ತನಾಗಬೇಕಾದರೆ ಮಾನವನು ಅಂತರ್ಮುಖಿಯಾಗಬೇಕು. ತನ್ನ ಅಂತರಾತ್ಮನನ್ನು ತಾನೇ ನಿರೀಕ್ಷಿಸಿಕೊಳ್ಳಬೇಕು. ತನ್ನಂತೆ ಪರರನ್ನು ಭಾವಿಸಬೇಕು 'ಆತ್ಮವತ್ ಸರ್ವಭೂತಾನಿ' ಎಂಬ ಭಾವನೆಯು ನೆಲೆಗೊಳ್ಳುವುದೇ ಮಾನವನ ಉನ್ನತ ಸ್ಥಿತಿಯ ಲಕ್ಷಣವು.

ದೇಹವನ್ನು ಮರೆತು, ತನ್ನೊಳಗೇ ತಾನು ಸಮಾಧಿಯೊಳಗಿರಬೇಕು. ಪಾಪರಹಿತನೂ ಶ್ರೇಷ್ಠನೂ ಆದ ಆತ್ಮನನ್ನು ನೆನೆಯಬೇಕು, ನೋಡಬೇಕು, ಅವನೇ ಪಂಡಿತನು. ॥ ೧೩ ॥

---

೧ ದುರ್ಗತಿಗಾಗಿ (ಅ)

ಸುರನರ ಪತಿಶತ ಪೂಜಿತನ
　　ತರುಣಾರುಣ ಸಮದೀಪ್ತಿ
ವರಪರಮಾತ್ಮನು ಚಿನ್ಮಯನು
　　ಪರಮಾನಂದದ ಭೂಮಿ　　　　|| ೧೪ ||

ಈರೈದೆರಡನುಪ್ರೇಕ್ಷೆಗಳ
　　ಧೀರರು ಭಾವಿಸಿ ಮುನ್ನ
ಸಾರಿದರುತ್ತಮ ಶಿವಗತಿಯ
　　ಧೀರರು ಕೇಳಿ ನೀವೆಲ್ಲ　　　　|| ೧೫ ||

ಇನಿತು ಕೆಲಂಬರು ವಿಷಯಗಳ
　　ಅನುಭವಿಸಿರ್ದುದು ಸಾಕು
ನೆನೆಯನುಪ್ರೇಕ್ಷೆಯ ಹನ್ನೆರಡು
　　ಘನಶಿವಸುಖ ಪತಿಯಾಗಿ　　　　|| ೧೬ ||

---

ಕೇವಲ ಶಾಸ್ತ್ರಗಳ ಪಠಣದಿಂದಾಗಲಿ, ಕರ್ಮಠ ಧರ್ಮಾಚರಣೆಯಿಂದಾಗಲಿ, ಪಂಡಿತಪದ ಪ್ರಾಪ್ತವಾಗಲಾರದು. ಆತ್ಮಜ್ಞಾನಿಯೇ ನಿಜವಾದ ಪಂಡಿತನು.

ತೀರ್ಥಂಕರರು ನೂರು ಇಂದ್ರರಿಂದಲೂ ನೂರು ಜನ ರಾಜರಿಂದಲೂ ಪೂಜೆಗೊಳ್ಳುವಂತಹರು. ಮಧ್ಯಾಹ್ನದ ಸೂರ್ಯನಿಗೆ ಸಮನಾದ ಪ್ರಕಾಶವುಳ್ಳವರು. ಪರಮಾತ್ಮರು. ಕೇವಲ ಜ್ಞಾನಯುಕ್ತರು. ಆನಂದ ಸ್ವರೂಪರು. || ೧೪ ||

ಹನ್ನೆರಡು ಅನುಪ್ರೇಕ್ಷೆಗಳನ್ನು ಭಾವಿಸಿ, ಧೀರರು ಈ ಮೊದಲು ಶಿವಪದವನ್ನು ಪಡೆದಿರುವರು. ಧೀರರೇ ನೀವೆಲ್ಲ ಕೇಳಿ. || ೧೫ ||

ಹಲವರು ವಿಷಯ ಸುಖಗಳನ್ನು ಅನುಭವಿಸಿದ್ದುದು ಸಾಕು. ಅದು ಬಂಧನಕಾರಿಯಾಗಿದೆ. ಅದನ್ನು ಬಿಟ್ಟು ಹನ್ನೆರಡು * ಅನುಪ್ರೇಕ್ಷೆಗಳನ್ನು ನೆನೆದು ನಿಶ್ಚಯ ಸುಖದ ಒಡೆಯನಾಗು. || ೧೬ ||

---

* (೧) ಅನಿತ್ಯ :— ಸಂಸಾರವೆಲ್ಲ ಅನಿತ್ಯವೆಂದು ಭಾವಿಸುವದು.
(೨) ಅಶರಣ :— ಆತ್ಮಕ್ಕೆ ಸದ್ಧರ್ಮದ ಹೊರತು, ಅನ್ಯ ಯಾವ ವಿಷಯಗಳೂ ಶರಣು ಹೋಗಲು ಯೋಗ್ಯವಾಗಲಾರವು.

ಸುರನರ[1] ಪತಿಗಳ ಸಂಪದವು
　　ಪರಿಪರಿಯಂಗದ ಕಾಂತಿ
ತರುಣಾಯುಷ್ಯದ ನಿತ್ಯತೆಯು
　　ಸುರಪತಿಕಾರ್ಮುಕದಂತೆ　　|| ೧೭ ||

ಪರಿಜನ ಪುರಜನ ಬಂಧುಗಳು
　　ಕರಿತುರಗಾದಿಗಳೆಲ್ಲ
ಪರಿಪರಿಯೌಷಧ ಮಂತ್ರಗಳು
　　ಮರಣದೊಳಿವು ಶರಣಿಲ್ಲ　　|| ೧೮ ||

---

ಇಂದ್ರಪದವಿ, ರಾಜಪದವಿ, ದೇಹ ಸೌಂದರ್ಯ, ತಾರುಣ್ಯ ಮೊದಲಾದವುಗಳು ಕಾಮನ ಬಿಲ್ಲಿನಂತೆ ಕ್ಷಣಭಂಗುರವಾದುವು. || ೧೭ ||

ಸೇವಕರು, ಊರ ಜನರು, ಆಪ್ತರು, ಇಷ್ಟರು ಆನೆ ಕುದುರೆ ಮೊದಲಾದವುಗಳು, ಅನೇಕ ವಿಧದ ಔಷಧಗಳು, ಮಂತ್ರಗಳು, ಏನಿದ್ದರೂ ಮರಣ ಕಾಲಕ್ಕೆ ಅವು ರಕ್ಷಿಸಲಾರವು. || ೧೮ ||

---

(೩) ಸಂಸಾರ:— ಪ್ರಪಂಚದ ನಿಜ ಸ್ವರೂಪವನ್ನು ಅರಿತುಕೊಳ್ಳುವುದು.
(೪) ಏಕತ್ವ:— ಕರ್ಮದ ವಿವಿಧ ಫಲಗಳನ್ನು ಭೋಗಿಸುವವನು ತಾನೊಬ್ಬನೇ ಎಂದು ತಿಳಿಯುವದು.
(೫) ಅನ್ಯತ್ವ:— ದೇಹವು ನಾನಲ್ಲ; ಪತ್ನಿ ಪುತ್ರರು ನನ್ನವರಲ್ಲ.
(೬) ಅಶುಚಿತ್ವ:— ಶರೀರ ಮಲಿನಮಯವಿದೆ.
(೭) ಆಸ್ರವ:— (ಕರ್ಮಬಂಧನದ ಪರಿ) ಯಾವುದರ ಯೋಗದಿಂದ ಕರ್ಮಬಂಧನವಾಗುವದೋ ಅದು.
(೮) ಸಂವರ:— ಆಸ್ರವದ ನಿರೋಧ ಮಾಡುವುದು.
(೯) ನಿರ್ಜರ:— ಮೊದಲಿನ ಕರ್ಮಕ್ಷಾಲನ ಮಾಡುವುದು.
(೧೦) ಲೋಕಾನುಭವ:— ಜಗತ್ತಿನ ತಿಳುವಳಿಕೆಯಿಟ್ಟುಕೊಂಡು ಬಾಳುವುದು.
(೧೧) ಬೋಧಿದುರ್ಲಭ:— ದರ್ಶನಜ್ಞಾನ, ಚಾರಿತ್ರ್ಯಗಳು ಕಷ್ಟಸಾಧ್ಯವಾದವುಗಳೆಂದು ಭಾವಿಸಿ, ಸಾಧನೆ ಮಾಡುವುದು.
(೧೨) ಧರ್ಮ:— ಆತ್ಮನ ನಿಜಸ್ವರೂಪವೇ ಆತ್ಮನ ಧರ್ಮವೆಂದು ಭಾವಿಸು.

---

೧ ನರಸುರ (ಬ)

ಓರ್ವನೆ ಕರ್ಮವ ಮಾಡುವನು
ಓರ್ವನೆ ದುಃಖವನುಂಬುವ
ಓರ್ವನೆ ಭವದೊಳು ತೊಳಲುವನು
ಓರ್ವನೆ ಶಿವಸುಖದಲ್ಲಿ ‖ ೧೯ ‖

ಧಾನ್ಯಧನಕನಕಾದಿಕದಿ
ಮಾನ್ಯರು ಮಿತ್ರರು ಸೂನು
ಕನ್ಯಾರತ್ನವು ಬಂಧುಗಳು
ಅನ್ಯರು ನಿನಗವರಲ್ಲ ‖ ೨೦ ‖

ಲಕ್ಷಿತ ಚತುರಾಸೀತಿಗಳ
ಲಕ್ಷದ ಭವದೊಳು ಬಂದು
ವೀಕ್ಷಿಸಿ ಭಾವಿಸಿ ಜಲಧಿಗತ
ಪಕ್ಷಿಯ ಪರಿಯಂತಾದಿ ‖ ೨೧ ‖

---

ಎಲ್ಲ ಕರ್ಮಗಳನ್ನು ಮಾಡುವಂತಹ ಆತ್ಮನು ಒಬ್ಬನೇ. ಅವನೇ ಸುಖ ದುಃಖಗಳನ್ನು ಭೋಗಿಸುವನು. ಅವನೇ ಭವ ಭವಗಳಲ್ಲಿ ತೊಳಲುವನು, ಶಿವ ಸುಖವನ್ನು ಹೊಂದುವನು. ‖ ೧೯ ‖

ದೇಹ ಮೊದಲುಗೊಂಡು ಹೆಂಡಿರು ಮಕ್ಕಳು ಅಣ್ಣ ತಮ್ಮಂದಿರು ಯಾರೂ ಆತ್ಮನಿಗೆ ಸಂಬಂಧಪಟ್ಟವರಲ್ಲ. ಆತ್ಮ ತನ್ನಷ್ಟಕ್ಕೆ ತಾನೊಬ್ಬನೆ ಇದ್ದಾನೆ. ಸ್ವತಂತ್ರ ನಿದ್ದಾನೆ.

ಕಾಳು ಕಡಿ, ಧನ ಸಂಪತ್ತು, ಮಿತ್ರರು ಮಕ್ಕಳು, ಬಂಧುಗಳು, ಎಲ್ಲರೂ ಎರಡನೆಯವರು. ನಿನಗವರಿಂದ ಉಪಯೋಗವಿಲ್ಲ. ‖ ೨೦ ‖

ಹೇ ಆತ್ಮನೇ! ಭಾವಿಸಿ ನೋಡು. ೮೪ ಲಕ್ಷ ಯೋನಿಗಳಲ್ಲಿ ಜನ್ಮ ತಾಳಿ ಬಂದೆ. ನೀರಿನಲ್ಲಿ ಬಿದ್ದ ಪಕ್ಷಿಯಂತೆ ನಿನ್ನ ಗತಿಯಾಗಿದೆ. ‖ ೨೧ ‖

ಪಕ್ಷಿಯ ಸಹಜ ಸ್ವಭಾವ ಹಾರುವದು. ಹಾಗೆಯೇ ಆತ್ಮನ ಸ್ವಭಾವವಾದರೂ ಮುಕ್ತನಾಗುವದಿರುತ್ತದೆ. ಆದರೂ ಕರ್ಮಲೇಪನದಿಂದ ಭವಗಳಲ್ಲಿ ತೊಳಲುತ್ತಿದೆ. ನೀರಿನಲ್ಲಿ ಬಿದ್ದ ಪಕ್ಷಿಗೆ ಹಾರಲಿಕ್ಕೆ ಬರುವುದೆ?

ಕಲಿಲವಿಲಿಂದಥ ಭರದಿಂದೆ
ಅಲಸದಿ ಮೂಜಗದಲ್ಲಿ
ಬಳಲುತ ತೊಳಲುತ ಕಾಲದೊಳು
ನೆಲಸಿದ ತಾಣವ ಕಾಣೆ || ೨೨ ||

ಮಲದಿಂಮೂತ್ರದಿ ಮಿದುಳುಗಳಿಂ
ಪುಳುಗಳ ರಾಶಿಗಳಿಂದ
ಎಲುವಿಂದನುಗತ ಕಾಯದೊಳು
ನೆಲಸಿದ ರತಿ ನಿನಗೆಂತು ? || ೨೩ ||

ಚೆನ್ನನೆ ನಿನ್ನಿಂದೀ ಕೊಳೆಯೊಡಲು
ಮನ್ನಿಸಿಕೊಂಬುದು ಕೇಳು
ಇನ್ನೀ ಜಗದೊಳು ತೀರ್ಥವನು
ಸನ್ನುತ ಶೀಲದಿ ಮಾಡು || ೨೪ ||

---

ತಿಳಿಮಳದಿಂದ ಕೂಡಿದವನಾದ ಆತ್ಮನು ಅಲಸ್ಯವಿಲ್ಲದೆ ಮೂರು ಲೋಕಗಳಲ್ಲಿ ಕಷ್ಟಪಡುತ್ತ ದಣಿಯುತ್ತ ಅನಂತ ಕಾಲದಿಂದ ತಿರಗುತ್ತಲಿದ್ದಾನೆ. ಒಂದೇ ಸ್ಥಳದಲ್ಲಿ ಸ್ಥಿರವಾಗಿ ನಿಂತುದನ್ನು ನಾನೆಂದೂ ನೋಡಲಿಲ್ಲ. || ೨೨ ||

ಮಲ ಮೂತ್ರಗಳಿಂದ, ಮಿದುಳಿನಿಂದ, ಹುಳಗಳ ರಾಶಿಗಳಿಂದ, ಎಲುವಿನಿಂದ ಕೂಡಿದ ದೇಹದಲ್ಲಿ ನೆಲಸಿದ ನಿನಗೆ ಸುಖವು ಹೇಗೆ ಸಿಕ್ಕೀತು ? || ೨೩ ||

ಆತ್ಮನೇ! ಇಂತಹ ಹೊಲಸು ದೇಹವೂ ಕೂಡ ನಿನ್ನನ್ನು ಪಡೆಯುವದರಿಂದ ಮರ್ಯಾದೆ ಹೊಂದುವುದು. ಇನ್ನು ಈ ಜಗದೊಳಗೆ ಒಳ್ಳೆಯ ಚಾರಿತ್ರ್ಯದಿಂದ ಬಾಳಿ ಮುಕ್ತಿಯನ್ನು ಹೊಂದುವ ಉಪಾಯವನ್ನು ಮಾಡು. || ೨೪ ||

ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ್ಯಗಳಲ್ಲಿ ಚಾರಿತ್ರ್ಯವೇ ಹಿರಿಯದು. ಚಾರಿತ್ರ್ಯವಿಲ್ಲದ ದರ್ಶನ ಜ್ಞಾನಗಳು ವ್ಯರ್ಥ. ಒಬ್ಬನಿಗೆ ಸಮ್ಯಕ್ ದೃಷ್ಟಿ ಉಂಟಾಗಬಹುದು. ಜ್ಞಾನವೂ ತುಂಬ ಇದ್ದೀತು. ಆದರೆ ಅವನ ಆಚರಣೆಯು ಶುದ್ಧವಾಗದ ವಿನಹ ಅವು ಫಲ ಕೊಡುವುದಿಲ್ಲ.

ಜಡತೆಯ ದೆಶೆಯಿಂದಾಸ್ರವವು
ತೊಡಕಿಸಿ ಕಟ್ಟುವವು
ನುಡಿಮನಕಾಯ ಗುಪ್ತಿಯ ಬಲದಿಂ
ಕೆಡಿಸಿಪೊಡಮಲಸು ನೀನು ||೨೫||

ಪಾವನ ಧ್ಯಾನದ ಬಲದಿಂದ
ಭಾವಿಸು ಶುದ್ಧತೆಯಿಂದ
ಪ್ರೋವಿಪ ಕರ್ಮದ ಸಂವರೆಯು
ಜೀವ ನಿನಗಹುದೆಲೆ ಭವ್ಯ || ೨೬ ||

ಉದಯೋದೀರಣ ಸತ್ವಗಳ
ಸದನವಿದೆನಿಸಿದ ಕರ್ಮ
ಉದುರುವುದಾಗಳೆ ಯೋಗಿಯೊಳು
ಬಿದಿರು ವಸಂತದೊಳೆಂತು || ೨೭ ||

---

ಆತ್ಮನಿಗೆ ಪರಮಾಣುಗಳ ಆವರ್ಣದಿಂದ ಕರ್ಮ ಬರುವದು. ಕರ್ಮದ ಬೆನ್ನ ಹಿಂದೆಯೇ ಭವಾವಳಿ ಕಟ್ಟಿದೆ. ಮಾತು, ಮನಸ್ಸು, ದೇಹಗಳೆಲ್ಲವನ್ನು ಶುದ್ಧವಾಗಿಟ್ಟುಕೊಳ್ಳುವುದರ ಬಲದಿಂದ ಕರ್ಮವನ್ನು ಜಯಿಸಿದರೆ ಆತ್ಮನು ಮುಕ್ತನಾಗುವನು || ೨೫ ||

ರಾಗ ದ್ವೇಷಾದಿಗಳನ್ನು ಮನಸ್ಸಿನಿಂದ ಬಿಡುವುದು ಮನೋಗುಪ್ತಿ.

ಕರ್ಮಬಂಧನ ಕಾರಣವಾದಂತಹ ಮಾತುಗಳನ್ನಾಡದಿರುವುದು ವಚನಗುಪ್ತಿ.

ಅನೀತಿಯನ್ನು ಬಿಡುವುದು ಕಾಯಗುಪ್ತಿ.

ಎಲೆ ಭವ್ಯ ಜೀವನೇ! ತಿಳಿದು ನೋಡು. ಒಳ್ಳೆಯ ಧ್ಯಾನದ ಬಲದಿಂದಲೂ ಶುದ್ಧಾಚರಣೆಯಿಂದಲೂ ನಿನಗೆ ಆವರಿಸಿದಂತಹ ಕರ್ಮವು ನಷ್ಟವಾಗುವದು. ||೨೬||

ಒಳ್ಳೆಯ ಧ್ಯಾನಿಯಾದ ಯೋಗಿಯಲ್ಲಿ, ಈ ಜನನ ಮರಣಗಳಿಗೆ ತವರುಮನೆಯೆನಿಸಿದ ಕರ್ಮವು ನಷ್ಟವಾಗುವುದು. ಯಾವ ರೀತಿ ಗೊತ್ತೇ? ವಸಂತ ಋತುವಿನಲ್ಲಿ ಬಿದಿರೆಲೆಗಳು ಉದುರಿ ಹೋಗುವಂತೆ. || ೨೭ ||

---

೧ ಭಾವ (ಕ)

ಧರ್ಮವೆ ನಿರ್ಮಲ ಸುರಧೇನು
ಧರ್ಮವೆ ಮೂಜಗಕೆಲ್ಲ
ಧರ್ಮವೆ ಕಲ್ಪಮಹೀರುಹವು
ಧರ್ಮವೆ ಪರುಷದ ಮೂರ್ತಿ || ೨೮ ||



ಪಡೆಯದ ಚಿನ್ಮಯ ಭಾವನೆಯ
ಪಡೆದು ತನ್ನೊಳು ನಿಲಲಾಗ
ಕಡೆದರೆ ದಧಿಯನು ಕೈಗಳಿಗೆ
ಎಡಸಹುದೆಂತಲೆ ಯೋಗಿ || ೨೯ ||

ಧೀರ ಮನೋಹರ ಧ್ಯಾನಿಗಳ
ಓರಂತಜ್ಞರು ಕಂಡು
ಚಾರುಧ್ಯಾನಿಗಳಿಲ್ಲೆಂದು
ಹೋರುವರೀ ಯುಗದಲ್ಲಿ || ೩೦ ||

---

ಧರ್ಮವೇ ಕಾಮಧೇನು. ಮೂರು ಜಗವನ್ನೆಲ್ಲ ಉದ್ಧರಿಸುವುದು ಧರ್ಮವೇ. ಧರ್ಮವೇ ಕಲ್ಪವೃಕ್ಷವು. ಮುಟ್ಟಿದ್ದನ್ನೆಲ್ಲ ಚಿನ್ನಗೊಳಿಸುವಂತಹ ಪವಿತ್ರ ಪರುಷ ಮೂರ್ತಿಯೆಂದರೆ ಸದ್ಧರ್ಮ. || ೨೮ ||

ಹಲವು ಜನ್ಮಗಳಲ್ಲಿ ತೊಳಲಿದರೂ ಇನ್ನೂ ದೊರಕಿಸದೆ ಇದ್ದ ಆತ್ಮಜ್ಞಾನವನ್ನು ಪಡೆದುಕೊಳ್ಳಬೇಕು. ಆಗ ಮೊಸರನ್ನು ಕಡೆದರೆ ಬೆಣ್ಣೆಯು ಯಾವ ಪ್ರಕಾರ ಕೈಗೆ ಬರುವದೋ ಅದೇ ರೀತಿ ಮುಕ್ತಿಯು ದೊರೆಕೊಳ್ಳುವುದು. || ೨೯ ||

ಈ ಕಾಲದಲ್ಲಿ ಅಜ್ಞರು ಒಳ್ಳೆಯ ಧ್ಯಾನಿಗಳಿಗೂ ಕೂಡ ಹೆಸರಿಡುವರು. ಅವರನ್ನೂ ಉಳಿದವರಂತೆ ಕಾಣುವರು. ಮತ್ತು ಶ್ರೇಷ್ಠ ತಪಸ್ವಿಗಳು ಇಲ್ಲೆಂದು ವಾದಿಸುವರು. || ೩೦ ||

ಜನರ ಸ್ತುತಿ ನಿಂದೆಗಳನ್ನು ಲಕ್ಷಿಸದೆ, ತನ್ನ ಆತ್ಮಕಲ್ಯಾಣವಾಗುವ ಕಾರ್ಯದಲ್ಲಿ ಹಗಲಿರುಳು ತನ್ಮಯನಾಗಿರತಕ್ಕದ್ದು.

ಗರುಡನ ಧ್ಯಾನದೊಳಹಿ ವಿಷವು
ಪರಿಹರಿಸುವದೆಂತಂತೆ
ಪರಮನ ಧ್ಯಾನದೊಳಘ ವಿಷವು
ಪರಿವುದು ತತ್ ಕ್ಷಣದಲ್ಲಿ || ೩೧ ||

ಮೌನ ತಪೋಗುಣ ಶೀಲಗಳು
ಧ್ಯಾನ ದೊಳಡಗಿಹವೆಲ್ಲ
ಜ್ಞಾನಿಗೆ ಜನನಸ್ಥಾನವಿದು
ಧ್ಯಾನಕೆ ವಂದಿಪೆನೊಮ್ಮೆ || ೩೨ ||

ನೂತನ ಮಂತ್ರದ ಧ್ಯಾನದೊಳು
ಭೂತಗಳೋಡುವವಂತೆ
ಜ್ಯೋತಿ ರೂಪನ ಭಾವನೆಯಿಂ
ಮತ್ತಿನ್ನಳಿವುದು ಕರ್ಮ || ೩೩ ||

---

ಗರುಡನನ್ನು ನೆನೆದೊಡನೆ ಹಾವಿನ ವಿಷವು ಹೇಗೆ ಪರಿಹಾರವಾಗುವದೋ ಹಾಗೆಯೇ ಪರಮಾತ್ಮನನ್ನು ಚಿಂತಿಸಿದ ಕ್ಷಣದಲ್ಲಿಯೇ ಪಾಪವೆಂಬ ವಿಷವು ಆತ್ಮನಿಂದ ದೂರವಾಗುವದು. || ೩೧ ||

ಪರಮಾತ್ಮನ ಚಿಂತನೆ ಅಂದರೆ ನೂರೆಂಟು ಜಪಮಣಿಗಳನ್ನು ತಿರುಗಿಸುವದಲ್ಲ. ತನ್ನ ಮನೋನಯನದ ಎದುರಿಗೆ ಪರಮಾತ್ಮನ ಗುಣಗಳನ್ನು ಇಟ್ಟುಕೊಳ್ಳುವುದು. ಆ ಗುಣಗಳನ್ನು ತನ್ನ ಆಚರಣೆಯಲ್ಲಿ ತರಲಿಕ್ಕೆ ಹಗಲಿರುಳು ಪ್ರಯತ್ನಿಸುವುದು, ಇದೇ ಪರಮಾತ್ಮನ ಚಿಂತನೆ.

ಮೌನ, ತಪ, ಗುಣ, ಶೀಲಗಳು ಧ್ಯಾನದಲ್ಲಿಯೇ ಅಡಕವಾಗುವುವು. ಧ್ಯಾನವೇ ಜ್ಞಾನದ ಉದಯಕ್ಕೆ ಕಾರಣವು. ಆದರಿಂದ ಧ್ಯಾನಕ್ಕೇನೇ ನಮಸ್ಕಾರ ಮಾಡುವೆ. || ೩೨ ||

ಹೊಸ ಮಂತ್ರದ ಜಪದಿಂದ ಭೂತಗಳು ಓಡಿಹೋಗುವಂತೆ ತೇಜವೇ ರೂಪವಾಗಿರುವಂತಹ ಪರಮಾತ್ಮನ ಭಾವನೆಯಿಂದ ಕರ್ಮವು ನಾಶವಾಗುವದು. || ೩೩ ||

ತಿರುಗಿದೊಡಾಗವು ತರ್ಕದೊಳು
ಪರಮಾತ್ಮನ ಕೆಲರಲ್ಲಿ
ನಿರುತದಿ ನೋಡುವರೆಲ್ಲವರು
ಮರದೊಳು ಕಿಚ್ಚಿರ್ದಂತೆ ॥ ೩೪ ॥

ಭೇದಿಸಿ ತನ್ನ ತಾ ನೋಡಿದೊಡೆ
ಅದು ಸುಶೀಲದ ರಾಶಿ
ಓದು ತಪಂಗಳು ಫಲಗೊಡವು
ರೂಢಿಯ[1] ಹೋಮದ ರೀತಿ ॥ ೩೫ ॥

ಕೇವಲ ಬೋಧನು ಸುಖಮಯನು
ದೇವನು ನಿಜತನುವೆಂಬ
ದೇವಾಲಯದೊಳಗಿರುತಿಹನು
ಭಾವಿಸಲಲ್ಲಿಯೆ[2] ತೋರ್ಕುಂ ॥ ೩೬ ॥

---

ಕಟ್ಟಿಗೆಯಲ್ಲಿ ಬೆಂಕಿ ಇರುವಂತೆ ಪರಮಾತ್ಮನು ನಮ್ಮಲ್ಲಿಯೇ ಇರುವನು. ಶಾಸ್ತ್ರ ತರ್ಕಗಳಿಂದ ನೋಡಿದರೆ ಅಲ್ಲಿಯೇ ಕಾಣುವನು. ಕಟ್ಟಿಗೆಗಳನ್ನು ತಿಕ್ಕಿದರೆ ಗುಪ್ತವಾಗಿರುವ ಅಗ್ನಿಯು ಪ್ರಕಟವಾಗುವದಿಲ್ಲವೆ? ಹಾಗೆಯೇ ತಪಸ್ಸು, ಶೀಲ, ಸುಗುಣಗಳಿಂದ ಆತ್ಮ ಪ್ರಕಾಶಗೊಳ್ಳುವುದು. ॥ ೩೪ ॥

ತಿಳಿದು ತನ್ನೊಳಗೆ ತಾ ನೋಡಿದರೆ ಆತ್ಮವು ಸುಶೀಲದ ರಾಶಿಯಂತೆ ತೋರುವುದು. ಅದನ್ನು ಬಿಟ್ಟು ಬರೇ ಓದು, ಸಲ್ಲದ ಜಪತಪಗಳನ್ನು ಮಾಡುವದು, ಇವೆಲ್ಲವುಗಳು ರೂಢಿಯೊಳಗಿರುವ ಯಜ್ಞದಂತೆ ವ್ಯರ್ಥವಾದವುಗಳು. ॥ ೩೫ ॥

ಕೇವಲ ಜ್ಞಾನಸ್ವರೂಪನೂ ಸುಖಮಯನೂ ಆದ ಪರಮಾತ್ಮನು ದೇಹವೆಂಬ ದೇವಾಲಯದೊಳಗೆ ಇರುವನು. ತಿಳಿದು ನೋಡಿದರೆ ಅಲ್ಲಿಯೆ ಕಾಣುವನು. ॥ ೩೬ ॥

ಕೇವಲ ಮರಣದ ನಂತರ ಇನ್ನೊಂದು ಜನ್ಮದಲ್ಲಿಯೇ ಇಹ ಜನ್ಮದ ಕರ್ಮಫಲ ಕೊಡುವುದೆಂಬುದು ಸಂಪೂರ್ಣ ಸತ್ಯವಲ್ಲ. ಇಹದಲ್ಲಿ ಮಾಡುವದೆಲ್ಲ ಪರಕಲ್ಲ. ಆದರಿಂದ ಇಹಜನ್ಮಕ್ಕೂ ಫಲ ದೊರಕುವದು. ಆದರಿಂದ ದೇಹವು ಕೇವಲ ಕೀಳು—ನಿರುಪ

---

೧ ಕಾದುವ ಭಟರುಗಳಂತೆ (ಬ) ೨ ಭಾವಿಸಿ ಕಾಣಲುಬೇಕು (ಬ)

ಮನಣಿಸಲರಿಯದೆ ನಿನ್ನೊಳಗೆ
ಭವಭವದೊಳು ನೀ ನೊಂದೆ
ತನಗತನಾಗು ನಿಜಾತ್ಮನೊಳು
ಭವಗಳು ಕೆಡುವವು ಮುಂದೆ || ೩೭ ||

ಕ್ಷೀರದ ವಾರಿಧಿ ಪರಿಯುಂತ
ಸಾರಿದೆ ದೇಹದೊಳಿನ್ನು
ಧೀರನೆ ಶೋಧಿಸಿ ನಿನ್ನೊಳಗೇ
ಅರಿದು ಭಾವಿಸಿ ನೋಡು || ೩೮ ||

ಕರೆವಾನಂದದ ಕಡಲೊಳಗೆ
ನೆರೆಮುಳುಗೀಸಾಡಿಮಿಂದು
ಮರೆವುದು ವಿಷಯಸುಖಂಗಳನು
ಬರಿದೆ ನೀ ಬಳಲದಿರಿನ್ನು || ೩೯ ||

---

ಯೋಗಿ— ಎಂದು ಭಾವಿಸಲೂ ಬಾರದು. ಅದರ ಬಗ್ಗೆ ಮಮತ್ವ ಬಿಡಬೇಕು. ಮರಣಕ್ಕಂಜಿ ಮಹಾಕಾರ್ಯ ಬಿಡಕೂಡದು. ದೇಹವನ್ನು ಆತ್ಮಕಲ್ಯಾಣದ ಸಾಧನೆಯನ್ನಾಗಿ ಬಳಸಿಕೊಳ್ಳಬೇಕು. ಅದಕ್ಕಂತೇ ಇಲ್ಲಿ ಆಚಾರ್ಯರು ತನುವು ದೇವಾಲಯವೆಂದು ಹೇಳಿರುವರು.

ನಿನ್ನನ್ನು ನೀನು ಕಾಣಲಿಲ್ಲ. ಅನೇಕ ಜನ್ಮಗಳಲ್ಲಿ ಹುಟ್ಟಿಬಂದೆ. ಕಷ್ಟಪಟ್ಟೆ. ನಿನ್ನ ದೃಷ್ಟಿ ನಿನ್ನಾತ್ಮನಲ್ಲಿ ಲೀನವಾಗಲಿ. ಅಂತರ್ದೃಷ್ಟಿಯಾಗಲಿ. ಮುಂದೆ ಭವಗಳು ತನ್ನಿಂದ ತಾನೇ ನಷ್ಟವಾಗುವವು. || ೩೭ ||

ಎಲೈ ಆತ್ಮನೇ! ಕ್ಷೀರಸಾಗರದ ವಿಷ್ಣುಪದ ಸಿಕ್ಕರೂ ನಿನಗೆ ದೇಹ ಬೆನ್ನು ಬಿಡಲಿಲ್ಲ. ಆದರಿಂದ ಧೀರತನದಿಂದ ನಿನ್ನಲ್ಲಿ ನೀನು ತನ್ಮಯನಾಗು. ತಿಳಿದು ನೋಡು. ಒರೆಗಲ್ಲಿಗೆ ಹಚ್ಚಿ ನೋಡು. || ೩೮ ||

ಆತ್ಮಾನಂದದ ಸಮುದ್ರದೊಳಗೆ ಚನ್ನಾಗಿ ಮುಳುಗು. ಈಸಾಡು. ಸ್ನಾನ ಮಾಡು. ಅದರಲ್ಲಿ ತನ್ಮಯನಾಗಿ ಪಂಚೇಂದ್ರಿಯಗಳಿಂದ ದೊರಕುವ ವಿಷಯ ಸುಖಗಳನ್ನು ಮರೆ. ಸುಮ್ಮನೆ ಕಷ್ಟಪಡಬೇಡ. || ೩೯ ||

ಬೊಮ್ಮನನರಿಯದ ಕುರಿಯನ್ವೊಲು
ಮುಮ್ಮಳಿಸಿದ ಜಗದಲ್ಲಿ
ಸುಮ್ಮನೆ ದುಃಖವನನುಭವಿಸಿ
ಕರ್ಮವ ಜೋಡಿಸಿಕೊಂಬೆ ॥ ೪೦ ॥

ಅರಿದು ನೀ ಭಾವಿಸು ಚಿನ್ಮಯನ
ನೆರೆ ಉಪವಾಸವದಕ್ಕು
ಅರಿಯದೆ ಹಸಿದರೆ ಮನದೊಳಗೆ
ಮರುಕದಿ ಕುದಿದು ನೀ ಸಾವೆ ॥ ೪೧ ॥

ಅಲಸದಿ ತನ್ನನು ಭಾವಿಸದೆ
ಸುಲಭ ತಪೋಗುಣರಾಶಿ
ಫಲವನು ಕೊಡದದು ರಸಗೆಟ್ಟ
ಆ ಲವಣ ವ್ಯಂಜನದಂತೆ ॥ ೪೨ ॥

---

ಬ್ರಹ್ಮಜ್ಞಾನವನ್ನರಿಯದೆ ಸುಮ್ಮನೆ ಕುರಿಯ ಹಾಗೆ ಅಶಾಂತವಾದ ಜಗದಲ್ಲಿ ದುಃಖವನ್ನು ಅನುಭವಿಸಿ, ಕರ್ಮವನ್ನು ಕಟ್ಟಿಕೊಳ್ಳುವೆ. ॥ ೪೦ ॥

ಮುಕ್ತಿಯನ್ನು ಬಯಸುವುದು ಆತ್ಮಕ್ಕೊಂದು ಹಸಿವು. ಪ್ರಕಾಶಮಯನಾದ ಅರಹಂತನನ್ನು ತಿಳಿದು ಭಾವಿಸುವುದೇ ನಿಜವಾದ ಹಸಿವು. ಈ ಹಸಿವೆಯ ತೃಪ್ತಿಯಿಂದಲೇ ಆತ್ಮ ಪುಷ್ಟಿಗೊಳ್ಳತಕ್ಕದು. ಇದನ್ನು ತಿಳಿಯದೆ ಹಸಿದರೆ ಸುಮ್ಮನೆ ಮನದಲ್ಲಿ ಮರುಕಗೊಂಡು ಸಾಯುವೆ. ॥ ೪೧ ॥

ಆತ್ಮತೃಷೆಯು ತೃಪ್ತಿಗೊಳ್ಳಬೇಕಾದರೆ ಸಮ್ಯಕ್‌ಜ್ಞಾನ ಬೇಕು. ಅಡಿಗೆಯಲ್ಲಿ ಉಪ್ಪನ್ನು ಸರಿಯಾಗಿ ಬಳಿಸಿದರೆ ಅದಕ್ಕೊಂದು ರುಚಿ. ಹದವರಿಯದೆ ಬಳಸಿದರೆ ರಸಪಾಕವನ್ನೇ ಕೆಡಿಸುವದು. ಅದರಂತೆ ತನ್ನ ಆತ್ಮವನ್ನು ತಿಳಿಯದೆ ಸುಲಭವೆನಿಸುವ ತಪವನ್ನು ಆಚರಿಸಿದರೆ ಫಲ ಸಿಗಲಾರದು. ॥ ೪೨ ॥

ವ್ಯವಹಾರ ನಯದೊಳು ನಿಪುಣತೆಯು
ಭುವನದೊಳೆಲ್ಲರಿಗುಂಟು
ಭವಹರ ಚಿನ್ಮಯ ಭಾವನೆಯು
ಅವನಿಯೊಳೆಲ್ಲರಿಗಿಲ್ಲ ॥ ೪೩ ॥

ಕನಸಿನೊಳಾದರು ಚಿನುಮಯನು
ಮನದೊಳು ಹೊಳೆಯಲು ಬಂದು
ಮುನಿಪತಿ ಕತಿಪಯ ಜನ್ಮದೊಳು
ಜನಿಸುಗು ಶಿವಸುಖದಲ್ಲಿ ॥ ೪೪ ॥

[೧]ಸಕಲೋಪಾದಿ ವಿಕಲ್ಪಗಳ
ತ್ರಿಕರಣ ಶುದ್ಧಿಯಿಂ ಬಿಟ್ಟು
ಪ್ರಕಟಿಸಿ ನಿನ್ನೊಳ್ ನೀನೆಲಸಿದೊಡೆ
ಅಕಲಂಕರೂಪ ನೀನಪ್ಪೆ ॥ ೪೫ ॥

---

ವ್ಯವಹಾರ ನಯ (ನಯ Point of view) ದಿಂದ ಜಗತ್ತಿನೊಳಗಿನ ಜನರೆಲ್ಲರೂ ಪ್ರಯತ್ನಪಟ್ಟರೆ ಜಾಣರೆನಿಸಿಕೊಳ್ಳಬಹುದು. ಆದರೆ ಹುಟ್ಟು ಸಾವುಗಳ ಬಂಧನವನ್ನೇ ಬಿಡಿಸುವ ಆತ್ಮಜ್ಞಾನ ಎಲ್ಲರಿಗೂ ಇರಲಾರದು. ॥ ೪೩ ॥

ತಪಸ್ವಿಗಳಿಗೆ ಕನಸಿನಲ್ಲಿಯಾದರೂ ಚಿನುಮಯ ಮೂರುತಿ ಹೊಳೆದರೆ ಸಾಕು. ಅಂಥವನು ಮುಂದೆ ಕೆಲವು ಜನ್ಮಗಳಲ್ಲಿಯೇ ಶಿವಸುಖವನ್ನು ಹೊಂದುವನು. ॥ ೪೪ ॥

ಎಲೈ ಜೀವನೆ! ಎಲ್ಲ ತೊಂದರೆಗಳನ್ನು ಸಂಶಯಗಳನ್ನು ಮನೋವಾಕ್ ಕಾಯಗಳ ಶುದ್ಧಿಯಿಂದ ಬಿಡು. ನಿನ್ನ ನಿಜ ಸ್ವರೂಪವನ್ನು ಪ್ರಕಟಗೊಳಿಸು. ನಿನ್ನಲ್ಲಿ ನೀನು ಅಂತರ್‌ಮುಖಿಯಾಗು. ಅಂದರೆ ಶುದ್ಧರೂಪ ನೀನಾಗುವೆ. ॥ ೪೫ ॥

ಅಶುಭ ಕರ್ಮಬಂಧನಕಾರಣವಾದ ಎಲ್ಲ ಆಚರಣೆಗಳೂ ಆತ್ಮನಿಗೆ ಉಪಾಧಿಗಳು. ಅಶ್ರದ್ಧೆ ಅಜ್ಞಾನಗಳು ಆತ್ಮನಿಗೆ ವಿಕಲ್ಪಗಳು.

---

೧ ಸಕಲ ವಿಕಲ್ಪದ ಜಾಲವನು, ಪ್ರಕಟಿಸಿಬಿಟ್ಟರೆ ನಿನ್ನೊಳ್ ॥
ಅಕಲಂಕರೂಪನು ನೆಲಸುವನು, ತ್ರಿಕರಣ ಶುದ್ಧತೆಯಿಂದ ॥ (ಬ)

ರಾಗಾದಿದೂರನ ನೋಡಿದೊಡೆ
ಯೋಗಿಯೊಳಾತನೆ ಚಕ್ರಿ
ಶ್ರೀಗದಿನಾಥನು ಮೂಜಗದ
ಬೇಗದೊಳಾತನ ನೋಡು ॥ ೪೬ ॥

ಆಗಮ ತರ್ಕ ಪುರಾಣಗಳಾ
ಸಾಗರಕವನೆ ಸುಧಾಂಶು
ಶ್ರೀಗುರುವಾತನೆ ಭವ್ಯರಿಗೆ
ಯೋಗದೊಳಾತನೆ ರಾಗಿ ॥ ೪೭ ॥

ನೀಗಿದನಾತನೆ ಸಂಸೃತಿಯ
ಭೋಗದೊಳಾತನೆ ಭೋಗಿ
ತ್ಯಾಗಿಯೊಳಾತನೆ ಸರ್ವರಿಗೆ
ತ್ಯಾಗಿ ಜಗತ್ರಯದಲ್ಲಿ ॥ ೪೮ ॥

---

ಧರ್ಮದಲ್ಲಿ ಶ್ರದ್ಧೆ ಇರಬೇಕು; ಆದರೆ ಅದು ವಿವೇಕ ವಿಚಾರ ಪೂರ್ಣವಾಗಿರಬೇಕು. ಅಂದರೆ ಅದು ಸಮ್ಯಕ್ ಜ್ಞಾನಕ್ಕೆ ಸಾಧನವಾಗುವದು. ಅಂಧಶ್ರದ್ಧೆಯು ಕುರುಡನ ಕೈಹಿಡಿದು ಹಳ್ಳವನ್ನು ಹೊಕ್ಕಂತೆ.

ಮೂರು ಲೋಕದ ಲಕ್ಷ್ಮಿಯ ಒಡೆಯನೂ ಸಿಟ್ಟು, ಭಯ ಮೊದಲಾದ ಹದಿನೆಂಟು ದೋಷಗಳನ್ನು ದೂರ ಮಾಡಿದವನೂ ಆದ ದೇವನನ್ನು ಬೇಗನೆ ನೋಡು. ಅಂದರೆ ನೀನು ಯೋಗಿಗಳಲ್ಲಿ ಶ್ರೇಷ್ಠನು. ॥ ೪೬ ॥

ಶಾಸ್ತ್ರ ತರ್ಕ ಪುರಾಣಗಳ ಸಮುದ್ರಕ್ಕೆ ತೀರ್ಥಂಕರನೇ ಚಂದ್ರನು. ಚಂದ್ರನ ಉದಯದಿಂದ ಸಾಗರ ಉಕ್ಕೇರುವಂತೆ ಆಗಮಗಳೆಲ್ಲ ಅವನಿಂದ ಜಗತುಂಬ ಹಬ್ಬಿದುವು. ಆದರಿಂದ ಆತನೆ ಭವ್ಯರಿಗೆ ಗುರುವು. ಆತ್ಮಯೋಗದಲ್ಲಿ ಆತನೇ ಪ್ರೇಮವುಳ್ಳವನು. ॥ ೪೭ ॥

ಭವಬಂಧನವನ್ನು ಹರಿದವನು ಜಿನೇಶ್ವರನು. ಭೋಗದಲ್ಲಿಯೂ ಶ್ರೇಷ್ಠನಾದ ಭೋಗಿಯು ಅವನೇ. ತ್ಯಾಗದೊಳಗೂ ಮೂರು ಲೋಕದಲ್ಲಿ ಶ್ರೇಷ್ಠನು ॥೪೮॥

---

೧ ಜನ್ಮವನು (ಬ)

ಉತ್ತಮನನಘನ ಮರಣದೊಳು
ತೆತ್ತಿಸಿ ಮನದೊಳು ಲೇಸು
ಚಿತ್ತದೊಳವನಿರದಿರುತಿರಲು
(೧)ಉತ್ತಮ ಮರಣವದಲ್ಲ ॥ ೪೯ ॥

ಸಾವಿನೊಳಾವುದ ಮನದೊಳಗೆ
ಭಾವಿಸಲಲ್ಲಿಗೆ ಬಂದು
ಜೀವನು ಜನಿಸುವ ಕಾರಣದಿಂ
ಭಾವಿಸು ಬೊಮ್ಮನನಿಂದು ॥ ೫೦ ॥

ತರುಗಳ ಕಿಡಿಗಳು ದವಶಿಖಿಯ
ಕರಕನು ಮಾಡುವವಂತೆ
ನಿರಘನ ನೆನೆದಡೆ ದಹಿಸುವನು
ದುರಿತವನಾಕ್ಷಣದಲ್ಲಿ ॥ ೫೧ ॥

---

ಮಾನವನು ಮರಣಕಾಲಕ್ಕೆ ಉತ್ತಮನೂ ಪಾಪರಹಿತನೂ ಆದ ಜಿನೇಶ್ವರನನ್ನು ಮನದಲ್ಲಿ ನೆನೆಯಬೇಕು. ಸಾಯುವ ಸಮಯಕ್ಕೆ ಅರಹಂತನ ರೂಪು ಮನದಲ್ಲಿ ನೆಲಗೊಳ್ಳದಿದ್ದರೆ ಅದು ಒಳ್ಳೆಯ ಸಾವಲ್ಲ ॥ ೪೯ ॥

ದೇಹಿಯು ಮೃತ್ಯುಕ್ಷಣದಲ್ಲಿ ಯಾವುದನ್ನು ನೆನೆಯುವನೋ ಅದನ್ನು ಪುನರ್ ಜನ್ಮದಲ್ಲಿ ಹೊಂದುವನು. ಆದುದರಿಂದ ಕೊನೆಯ ಕ್ಷಣದಲ್ಲಿ ಬ್ರಹ್ಮನನ್ನು ನೆನೆಯಬೇಕು. ॥ ೫೦ ॥

ತರುಗಳಲ್ಲಿ ಅವಿತುಕೊಂಡಿರುವ ಗುಪ್ತರೂಪದ ಕಿಡಿಯು ದಾವಾಗ್ನಿಯಾಗಿ ತಿರುಗಿ ಆ ಗಿಡಗಳನ್ನೇ ಸುಡುವಂತೆ ನಿರ್ಮಲನಾದ ಪರಮಾತ್ಮನನ್ನು ನೆನೆಸಿದರೆ ಪಾಪವು ಒಂದು ಕ್ಷಣದಲ್ಲಿ ನಷ್ಟವಾಗಿ ಹೋಗುವದು. ॥ ೫೧ ॥

ಕರ್ಮದಿಂದ ಆಚ್ಛಾದಿತನಾದ ಆತ್ಮನು ನಿಜಸ್ವರೂಪವನ್ನು ಪ್ರಕಟಿಸಿದರೆ ಆ ಕರ್ಮವು ಸುಟ್ಟು ಹೋಗುವುದು. ಪ್ರಕಟವಾಗುವದೂ ಶುಭಕರ್ಮದ ಯೋಗದಿಂದಲೇ. ಶುಭಕರ್ಮವು ಅಶುಭಕರ್ಮ ನಾಶಕ್ಕೆ ಕಾರಣವು.

---

(೧) ಕತ್ತೆಯ ಸಾವೆಂತಂತೆ (ಕ)

ಶಮಸೋನಿಲಗಳ ವಂದಿಸಲು
ವಿಮಲಸುತತ್ವವು ತನ್ನ
ಸಮರಸ ಗರ್ಭಿತವಾಗಿಹುದು
ಯಮಿಜನಕಿದು ಧನರಾಶಿ ॥ ೫೨ ॥

ಸಕಲವಿಭಾವದ ಕೇಡಿನೊಳು
ಅಕಲಂಕ ಚಿನ್ಮಯ ಮೂರ್ತಿ
ಪ್ರಕಟಿತ ನಿರ್ಭರ ಸಮರಸಗೆ
ಸುಖಮಯವಾಗಿಹುದಲ್ಲಿ ॥ ೫೩ ॥

ಎಂಟು ಗುಣಂಗಳು ಬೆಳಗುವವು
ಎಂಟಘನಾಶಗಳಿಂದ
ದಾಂಟುವೆ ಸಂಸಾರಾಂಬುಧಿಯ
ನೀಂಟಲು ಸಮರಸವನ್ನು ॥ ೫೪ ॥

---

ಚಲುವು ವಂದನೀಯ. ನಿಜವಾದ ಸೌಂದರ್ಯ ಅರಹಂತನಿಗೇ ಇದೆ. ಸೌಂದರ್ಯ ಸತ್ಯಮಯವಾದುದು. ಸತ್ಯಕ್ಕೆ ಬಾಗುವದರಿಂದ ಒಳ್ಳೆಯ ತತ್ವದಲ್ಲಿ ಸಮರಸವಾದಂತಾಗುವದು. ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ, ಈ ಮಹಾವ್ರತಗಳನ್ನು ಪಾಲಿಸುವ ಜನಕ್ಕೆ ಇದು ಧನದ ರಾಶಿಯಿದ್ದಂತೆ. ॥ ೫೨ ॥

ಎಲ್ಲ ಕೆಟ್ಟ ಭಾವನೆಗಳನ್ನು ಕೆಡಿಸುವವನಿಗೆ— ದೋಷವಿಲ್ಲದ ಚಿನ್ಮಯ ಮೂರ್ತಿಯನ್ನು ಪ್ರಕಟಿಸಿಕೊಳ್ಳಬೇಕೆಂಬ ಲವಲವಿಕೆಯಿಂದ ಕೂಡಿದವನಿಗೆ— ಸುಖವಾಗುವುದು. ॥ ೫೩ ॥

ಜ್ಞಾನಾವರಣ, ದರ್ಶನಾವರಣ, ವೇದನೀಯ, ಮೋಹನೀಯ, ನಾಮ, ಗೋತ್ರ, ಆಯು, ಮತ್ತು ಅಂತರಾಯ, ಈ ಎಂಟು ಕರ್ಮಗಳು ನಾಶಹೊಂದುವದರಿಂದ ಸಮ್ಯಕ್ತ್ವ, ಕೇವಲಜ್ಞಾನ, ಕೇವಲದರ್ಶನ, ಅನಂತವೀರ್ಯ, ಸೂಕ್ಷ್ಮತ್ವ, ಅವಗಾಹನ, ಅಗುರುಲಘುತ್ವ, ಅವ್ಯಾಬಾಧತೆ, ಈ ಎಂಟು ಗುಣಗಳು ಆತ್ಮನಲ್ಲಿ ವಿಕಾಸ ಹೊಂದುತ್ತವೆ. ಆಗ ಆತ್ಮನು ಸಂಸಾರ ಸಮುದ್ರವನ್ನು ದಾಟಿ ಪರಮಾತ್ಮನಲ್ಲಿ ಸಮರಸನಾಗುವನು. ॥ ೫೪ ॥

ವಿಮಲಸುಜ್ಞಾನವು ದರ್ಶನವು
ಯಮಿನುತ ಚರಿತವು ರಮ್ಯ
ಸಮರಸ ಭಾವದೊಳೊಂದಿಹವು
ಸಮರಸಕೆಣೆಯನು ಕಾಣೆ || ೫೫ ||

ಪರ್ವಿದ ಪರಮಾನಂದಮಿದು
ಸರ್ವರ ಮುಕ್ತಿಗೆ ಹೇತು
ದುರ್ವಾರೇಂದ್ರಿಯ ದಂತಿಗಳ
ಪರ್ವಲಕಿದು ಮೃಗವೈರಿ || ೫೬ ||

ನಿರವಧಿ ಗುಣನಿಧಿ ಚಿನ್ಮಯನ
ಹರುಷದಿ ಭಾವಿಸುವಲ್ಲಿ
ಸ್ಫುರಿಸುವ ಪರಮಾನಂದವನು
ವರ ಶಮವೆಂಬನು ಯೋಗಿ || ೫೭ ||

---

ಪಂಚಮಹಾವ್ರತಗಳನ್ನು ಪಾಲಿಸುವವರಿಂದ ಸ್ತುತಿಸಲ್ಪಟ್ಟ ಸಮ್ಯಕ್ ಜ್ಞಾನ, ದರ್ಶನ ಚಾರಿತ್ರ್ಯಗಳು ಕೂಡಿರುವದಕ್ಕೆ ಸಮರಸವೆನ್ನುವರು. ಇಂಥ ಸಮರಸಕ್ಕೆ ಜಗತ್ತಿನಲ್ಲಿ ಸರಿಯಾದುದು ಯಾವುದೂ ಇಲ್ಲ. || ೫೫ ||

ಈ ರತ್ನತ್ರಯಗಳಿಂದ ಉಂಟಾದ ಪರಮಾನಂದವು ಎಲ್ಲರ ಮುಕ್ತಿಗೆ ಕಾರಣವಾದುದು. ತಡೆಯಲು ಅಸಾಧ್ಯವಾದಂತಹ ಇಂದ್ರಿಯಗಳೆಂಬ ಆನೆಗಳ ಪಡೆಗೆ ಇದು ಸಿಂಹ ಇದ್ದಂತೆ. || ೫೬ ||

ಪರಮಾನಂದದಲ್ಲಿ ತನ್ಮಯನಾದವನಿಗೆ ವಿಷಯ ಸುಖದಾಸೆಯು ನಷ್ಟವಾಗುವದು, ಕೀಳೆನಿಸುವದು.

ದೋಷರಹಿತ (Unblameable) ಗುಣಗಳ ಸಮುದ್ರನೇ ಎನಿಸುವಂತಹ ಅರಹಂತನನ್ನು ಆನಂದದಿಂದ ತಿಳಿದು ನೋಡಿದಾಗ ಪರಮಾನಂದವು ಜನಿಸುವುದು. ಅದು ಯೋಗಕ್ಕೆ ಸರಿಯಾದುದು. || ೫೭ ||

ಪಳಿಕಿನ ಶಿಲೆಯೊಳು ನಿರ್ಮಿಸಿದ
　　ಸಲೆ ಜಿನರಾಕೃತಿಯಂತೆ
ಒಲಿದು ನಿರೀಕ್ಷಿಸಿ ನಿನ್ನೊಳಗೆ
　　ಬೆಳಗೊಂದಪ್ಪುದ ನೋಡು　　|| ೫೮ ||

ಇದು ಗುಣರತ್ನದ ಭೂಷಣವು
　　ಇದು ಪರಮಾತ್ಮನ ದೀಪ್ತಿ
ಇದು ಸ[ಶ]ಮನೆಂಬರು ಕೋವಿದರು
　　ಚಿದಮಲ ಸೌಖ್ಯವಿಕಾಸಿ　　|| ೫೯ ||

ಇದು ಚಿಂತಾಮಣಿ ಜಾಣರಿಗೆ
　　ಇದು ಪಾವನ ಸುರಧೇನು
ಇದು ನಿರುಪಾಧಿಕ ಸುರಕುಜವು
　　ಚಿದಮಲಸೌಖ್ಯವಿಕಾಸಿ　　|| ೬೦ ||

---

ಮೆಚ್ಚಿ ನಿರೀಕ್ಷಿಸು. ಸಾಧನೆ ಮಾಡು. ನಿನ್ನಲ್ಲಿ ನೀನು ನಿರೀಕ್ಷಿಸು. ಸ್ಫಟಿಕದಲ್ಲಿ ಮಾಡಿದಂತಹ ಸುಂದರ ಜಿನಮೂರ್ತಿಯು ನಿನ್ನಲ್ಲಿ ತೋರುವದು. ಅದೇ ಪ್ರಕಾಶಮಯವಾದ ಆತ್ಮನ ಬೆಳಕು. || ೫೮ ||

* ಇದು ಶ್ರೇಷ್ಠ ಗುಣಗಳೆಂಬ ರತ್ನದ ಭೂಷಣವಿದ್ದಂತೆ. ಇದು ಪರಮಾತ್ಮನ ತೇಜವು. ಇದಕ್ಕೆ ಜಾಣರು ಸಮಭಾವ ಎನ್ನುವರು. ಇದು ಉಜ್ಜ್ವಲವಾದ ಚಿತ್ ಶಕ್ತಿಯನ್ನು ವಿಕಾಸಗೊಳಿಸುವಂತಹದು ಇರುತ್ತದೆ. || ೫೯ ||

ಜಾಣರಿಗೆ ಇದು ಬೇಡಿದ್ದದ್ದನ್ನು ಕೊಡುವ ರತ್ನ. ಇದು ಪವಿತ್ರವಾದ ಕಾಮಧೇನುವು. ಇದು ಅಡ್ಡಿ ಆತಂಕಗಳಿಲ್ಲದ ಕಲ್ಪವೃಕ್ಷವು. ಮೇಲಾಗಿ ಒಳ್ಳೆಯ ಚಿತ್‌ಶಕ್ತಿಯನ್ನು ಅರಳಿಸುವಂತಹದು ಇರುತ್ತದೆ. || ೬೦ ||

---

* ೫೯ನೆಯ ಪದ್ಯದಿಂದ ೬೯ನೆಯ ಪದ್ಯದ ವರೆಗೆ 'ಇದು' ಎಂಬ ಸರ್ವನಾಮವು 'ಆತ್ಮನಲ್ಲಿ ಮೂಡಿದ ಬೆಳಕು' ಈ ಅರ್ಥದಲ್ಲಿ ಬಳಸಲಾಗಿದೆ.

ಇದು ಸುರವಿದ್ಯಾ ಸಾಗರವು
ಇದು ಭವರೋಗದ ಮದ್ದು
ಇದು ಕುದೃಷ್ಟಿಗಳಂಜನವು
ಚಿದಮಲಸೌಖ್ಯವಿಕಾಸಿ || ೬೧ ||

ಇದುವೆ ಸುಶೀಲವು ಮುನಿಗಳಿಗೆ
ಇದುವೆ ಮನೋಜನ ವೈರಿ
ಇದುವೆ ರಹಸ್ಯವು ಜಿನಮತದ
ಚಿದಮಲಸೌಖ್ಯವಿಕಾಸಿ || ೬೨ ||

ಇದುವೆ ಶರಣ್ಯವು ಗಣ್ಯರಿಗೆ
ಇದುವೆ ದಯಾಮೃತಸಿಂಧು
ಇದುವೆ ನರಾಮರ ಪುಣ್ಯನಿಧಿ
ಚಿದಮಲಸೌಖ್ಯವಿಕಾಸಿ || ೬೩ ||

---

ಇದು ದೇವತೆಗಳ ವಿದ್ಯೆಯ ಸಮುದ್ರವು. ಇದು ಪ್ರಪಂಚವೆಂಬ ರೋಗಕ್ಕೆ ಔಷಧವು. ಇದು ಕೆಟ್ಟದೃಷ್ಟಿಗೆ—ಮಿಥ್ಯಾದೃಷ್ಟಿ—ಅಂಜನವು. ಚಿತ್ ಶಕ್ತಿ ಸೌಖ್ಯಗಳನ್ನು ಅರಳಿಸುವಂತಹದು. || ೬೧ ||

ಮುನಿಗಳಿಗೆ ಇದು ಒಳ್ಳೆಯ ಶೀಲವು. ಇದು ಕಾಮನ ವೈರಿಯು. ಜೈನ ಧರ್ಮದ ತಿರುಳು ಇದೇ. ಚಿತ್‌ಶಕ್ತಿಯ ಶುದ್ಧ ವಿಕಾಸವಿದು. || ೬೨ ||

ಶ್ರೇಷ್ಠ ಜನರಿಗೆ ಆಶ್ರಯಸ್ಥಾನವು ಇದು. ದಯೆ ಎಂಬ ಅಮೃತದ ಸಮುದ್ರವು. ಇದುವೆ ಮನುಷ್ಯರಿಗೂ ದೇವತೆಗಳಿಗೂ ಪುಣ್ಯದ ರಾಶಿಯು. ಚಿತ್ ಶಕ್ತಿಯನ್ನು ಅರಳಿಸುವಂತಹದಾಗಿದೆ, ಈ ಆಂತರ್ ಬೆಳಕು. || ೬೩ ||

ಮಾನವನು ತನ್ನನ್ನು ತಾನು ತಿಳಿದುಕೊಳ್ಳಬೇಕು. ತನ್ನರಿವು ತನಗೆ ಗುರು. ತನ್ನರಿವು ಉಂಟಾದಾಗ—ತನ್ನ ಶಕ್ತಿಯಲ್ಲಿ ವಿಶ್ವಾಸವುಂಟಾದಾಗ—ಅವನಲ್ಲಿ ಆತ್ಮ ವಿಸ್ಮೃತಿ ಅಳಿಯುವದು. ಅದು ಅಳಿಯುತ್ತ ಹೋದಂತೆ ಮಾನವನಲ್ಲಿಯ ಆಂತರ್ ಬೆಳಕು ಬೆಳೆಯುತ್ತ ಹೋಗುವದು.

ಇದುವೆ ಸುಧರ್ಮದ ಮಂದಿರವು
　　ಇದುವೆ ಜಗತ್ರಯ ಬಂಧು
ಇದುವೆ ಸುತತ್ವವು ಶಿಷ್ಟರಿಗೆ
　　ಚಿದಮಲಸೌಖ್ಯವಿಕಾಸಿ ॥ ೬೪ ॥

ಇದುವೆ ವಿಚಾರದ ಕಟ್ಟಕಡೆ
　　ಇದು ಚಾತುರ್ಯದ ಗಾಡಿ
ಇದುವೆ ಚೂಡಾಮಣಿ ಭೂತ್ರಯದ
　　ಚಿದಮಲಸೌಖ್ಯವಿಕಾಸಿ ॥ ೬೫ ॥

ಇದುವೆ ಸುಖಾಮೃತ ಭಾಜನವು
　　ಇದುವೆ ಸೌಖ್ಯದ ಕಡೆಯೆಣೆ
ಇದುವೆ ಸುಸಾರವು ಶಾಸ್ತ್ರಗಳ
　　ಚಿದಮಲಸೌಖ್ಯವಿಕಾಸಿ ॥ ೬೬ ॥

---

ಇದು ಒಳ್ಳೆಯ ಧರ್ಮದ ಮಂದಿರವು. ಮೂಲೋಕಕ್ಕೆಲ್ಲ ಬಂಧುಬಳಗವು ಇದೇ. ಸಜ್ಜನರಿಗೆ ಇದೇ ಒಳ್ಳೆಯ ತತ್ವವು. ಶುದ್ಧವಾದ ಆತ್ಮಸುಖವನ್ನು ಅರಳಿಸುವಂತಹದು ಈ ಒಳಬೆಳಕಾಗಿರುತ್ತದೆ. ॥ ೬೪ ॥

ವಿಚಾರದ ಕೊನೆಯು ಇದು. ಇದೇ ಜಾಣತನದ ವೈಭವ. ಚತುರತೆಯ ಚಲುವು. ಮೂರುಲೋಕದಲ್ಲಿ ಶ್ರೇಷ್ಠವಾದುದು. ಚಿತ್‌ಶಕ್ತಿಯ ಸೌಖ್ಯವನ್ನು ಅರಳಿಸುವಂತಹದು. ॥ ೬೫ ॥

ಇದು ಸೌಖ್ಯವೆಂಬ ಅಮೃತದ ಪಾತ್ರವಾದುದು. ಇದು ಸುಖದ ಕೊನೆಯ ಮೆಟ್ಟಲು. ಇದು ಎಲ್ಲ ಶಾಸ್ತ್ರಗಳ ತಿರುಳು. ಚಿತ್‌ಶಕ್ತಿಯ ಸುಖವನ್ನು ಹೆಚ್ಚಿಸು-ವಂತಹದು ॥ ೬೬ ॥

ಒಳಬೆಳಕು ಸುಖಾಮೃತದ ಪಾತ್ರೆ ಎನ್ನುವಲ್ಲಿ ಒಂದು ಸ್ವಾರಸ್ಯವಾದ ಅರ್ಥವಿದೆ. ಅಮೃತಕ್ಕೆ ಪಾತ್ರೆ ಆಧಾರ. ಹಾಗೆಯೆ ಮಾನವನಲ್ಲಿ ಒಳಬೆಳಕು ಬೀಳುವುದೇ ಸುಖಕ್ಕೆ ಕಾರಣವೆಂದರ್ಥ.

ಆಲಂಬೋರ್ಜಿತ (?) ಪಥದೊಳಗೆ
ತಾಳಲು ಗತಿಯನು ನೀನು
ಕೇಳಾದ ರಾಗಾದಿ ತಿಮಿರಗಳ
ಬಾಲನಭೋಮಣಿಯಂತೆ ॥ ೬೭ ॥

ನರ ಸುರ ನಾರಕ ಭೇದಗಳಿಂ
ತಿರುಕನು ಮೆಂಬುದರಿಂದ
ಪಿರಿದು ವಿಭಿನ್ನನು ನಿಶ್ಚಯದಿಂ
ನಿರವಧಿ ಬೋಧನು ನೀನು ॥ ೬೮ ॥

ತರುಣನು ವೃದ್ಧನು ಬಾಲಕನು
ಪುರುಷನು ಷಂಡನುಮೆಂದು
ತರುಣಿಯುಮೆಂಬೀ ಪರಿಣತಿಯಿಂ
ನಿರಘನು ಭಿನ್ನನು ನೀನು ॥ ೬೯ ॥

---

ಇಂತಹ ಆತ್ಮತೇಜದ ಪಥದೊಳಗೆ ನಿನ್ನ ಪ್ರಗತಿಯು ಆದರೆ ಕೇಳುವದೇನು ? ಸಿಟ್ಟು ಮೊದಲಾದ ಹದಿನೆಂಟು ಕೆಟ್ಟ ದೋಷಗಳೆಂಬ ಕತ್ತಲೆಗೆ ಬಾಲಸೂರ್ಯನು ಉದಯವಾದಂತೆ ಆಗುವದು. ॥ ೬೭ ॥

ಸೂರ್ಯೋದಯದಿಂದ ಕತ್ತಲೆಯು ನಾಶವಾಗುವಂತೆ ಆತ್ಮತೇಜದಿಂದ ಕರ್ಮಗಳೆಲ್ಲ ಓಡಿಹೋಗುವವು.

ನಿಶ್ಚಯ ನಯದಿಂದ ನೋಡಲು ಆತ್ಮನು ಮಾನವ ದೇವತೆಗಳು ನಾರಕಿಗಳು ಇವೇ ಮೊದಲಾದ ಗತಿಗಳಲ್ಲಿ ತಿರುಗುವ ತಿರುಕನಲ್ಲ. ಕಾಲವನ್ನು ಮೀರಿ ನಿಂತಂತಹ ಬೋಧಿಜ್ಞಾನವುಳ್ಳವನು, ಆತ್ಮನು. ॥ ೬೮ ॥

ತರುಣ, ಮುದುಕ, ಹುಡುಗ, ಗಂಡಸು, ಹೆಂಗಸು, ನಪುಂಸಕನು, ತರುಣಿಯು ಎಂಬ ದೈಹಿಕ ಅವಸ್ಥೆಗಳಿಂದ ಆತ್ಮನು ಬೇರೆಯೇ ಇದ್ದಾನೆ. ಮತ್ತು ಪಾಪರಹಿತನೂ ಇದ್ದಾನೆ. ॥ ೬೯ ॥

ಒಡೆಯನು ಭೃತ್ಯನು ಯಾಚಕನು
　　ಬಡವನು ಧನಿಕನುಮೆಂದು
ಜಡರುಗಳಾಡುವರನಘನೊಳು
　　ನುಡಿಯರು ನಿಷ್ಕಲನೆಂದು 　　　　॥ ೨೦ ॥

ಜಾತಿಕುಲಂಗಳು ನಿನಗಿಲ್ಲ
　　ಪ್ರೀತಿವಿಷಾದಗಳಿಲ್ಲ
ವೀತಶರೀರಗೆ ಹೆಸರಿಲ್ಲ
　　ಮಾತಿಗೆ ಗೋಚರನಲ್ಲ 　　　　॥ ೨೧ ॥

ಭಾವಿಸು ವರ್ಣರಸಾದಿಗಳಿಂ
　　ಜೀವನು ಹೊಂದುವನಲ್ಲ
(೧)ಆವಕಾಲಳೊಂದಿಹನು
　　ಸಾವುದು ಪುಟ್ಟುವದಿಲ್ಲ 　　　　॥ ೨೨ ॥

---

ಒಡೆಯ, ಸೇವಕ, ಬಿಕ್ಷುಕ, ಬಡವ, ಸಿರಿವಂತ ಎಂದು ಜಡಮತಿಗಳಾಡುವರು. ಪಾಪರಹಿತನು ನಿಷ್ಕಲನು ಎಂದು ಅವರು ಅನ್ನುವದಿಲ್ಲ. ॥ ೨೦ ॥

ಜಾತಿಕುಲಗಳು ಆತ್ಮನಿಗೆ ಇಲ್ಲ. ಆದರಂತೆ ಪ್ರೀತಿದುಃಖಗಳೂ ಇಲ್ಲ. ಶರೀರವಿಲ್ಲದವನಿಗೆ ಹೆಸರೂ ಕೂಡ ಇಲ್ಲ. ಬಣ್ಣರಸಗಳಿಂದ ಹೆಸರಿಟ್ಟು ಹೇಳಲು ಮಾತಿಗೂ ನಿಲುಕುವಂತಿಲ್ಲ ಆತ್ಮ. ॥ ೨೧ ॥

ವಿಚಾರಿಸಿ ನೋಡಿದರೆ ಆತ್ಮನಿಗೆ ಯಾವ ರೂಪರಾಗಗಳೂ ಇಲ್ಲ. ಅವುಗಳನ್ನು ಅವನು ಹೊಂದುವದಿಲ್ಲ. ಯಾವಾಗಲೂ ತಾನೊಬ್ಬನೇ ಇರುವನು. ಇದ್ದಂತೆಯೇ ಇರುವನು. ಹುಟ್ಟು ಸಾವುಗಳು ಅವನಿಗೆ ಇಲ್ಲ. ॥ ೨೨ ॥

ಜೈನ ಶಾಸ್ತ್ರದ ಪ್ರಕಾರ ಆತ್ಮನನ್ನು ಆವರಿಸುವ ಶರೀರಗಳು ಎರಡು ವಿಧವಾದವುಗಳು. ಒಂದು ಸ್ಥೂಲ ಶರೀರ, ಇನ್ನೊಂದು ಸೂಕ್ಷ್ಮಶರೀರ. ಇಹದಲ್ಲಿ ಆತ್ಮವು ಈ ಸ್ಥೂಲ ದೇಹವನ್ನು ಬಿಟ್ಟು ಹೋದರೂ ಅದರ ಸಂಗಡ ಸೂಕ್ಷ್ಮದೇಹವು ಹೋಗುವದು. ಅದರಿಂದ ಇನ್ನೊಂದು ಜನ್ಮದಲ್ಲಿ ದೇಹ ಬಂಧನವಾಗುವದು. ಈ ಸ್ಥೂಲ

---

(೧) ಆವ ದೋಷಗಳು ತನಗಿಲ್ಲ. (ಅ)

ನುಡಿಯನು ನುಡಿಸನು ನಿಂದಿಸನು
ಮಿಡುಕನು ತನ್ನೊಳು ನಿಂದು
ಪಡೆದಾನಂದದಿ ತಣಿದಿಹನು
ಬಿಡುವನು ತನುಮೊದಲಾಗಿ ॥ ೨೩ ॥

ಪರಮಸಮಾಧಿ ಸರೋವರದ
ಸುರುಚಿರ ತಟದೊಳು ಮಿಂದು
ಇರುತಿರೆ ಕಲುಷವು ಮನದಿಂದ
ಪರಿವುದು ಕದಡಿ ಕಲಂಕಿ ॥ ೨೪ ॥

ಶೂನ್ಯಾಧ್ಯಾನದ ಮಹಿಮೆಗಳಿಂ
ಧನ್ಯನು ತಾ ಸುಕುಮಾರ
ಮಾನ್ಯರು ಪಂಚ ಸುಪಾಂಡವರು
ಸನ್ಯಾಸಾನ್ವಿತರೆಲ್ಲ ॥ ೨೫ ॥

---

ಸೂಕ್ಷ್ಮದೇಹಗಳನ್ನು ನೆಲಗಡಲೆಯ ಹೊರಸೊಪ್ಪು, ಒಳಗಿನ ಬೀಜಕ್ಕೆ ಸುತ್ತಿದ ಕೆಂಪು ಸೊಪ್ಪುಗಳಿಗೆ ಹೋಲಿಸಿ ಹೇಳಬಹುದು. ಆ ಕೆಂಪು ಸೊಪ್ಪೆಯನ್ನು ತೆಗೆದು ಹಾಕಿದರೆ ಕಾಳು ಮೊಳಕೆಯೊಡೆಯದು. ಅದರಂತೆ ಸೂಕ್ಷ್ಮದೇಹ ಇಲ್ಲವಾದಾಗಲೇ ಆತ್ಮನಿಗೆ ಪುನರ್ ಜನ್ಮವಿಲ್ಲ.

ಆತ್ಮನು ಮಾತಾಡನು. ಅನ್ಯರನ್ನು ಮಾತಾಡಿಸನು. ಇನ್ನೊಬ್ಬರನ್ನು ನಿಂದಿಸಲಾರನು. ತಾನು ಮರುಗಲಾರನು. ತನ್ನಲ್ಲಿ ತಾನೇ ತನ್ಮಯನಾಗಿರುವನು. ಪಡೆದ ಆನಂದದಲ್ಲಿ ಸಮಾಧಾನ ಹೊಂದಿರುವನು. ದೇಹ ಮೊದಲಾದವುಗಳನ್ನು ಬಿಡುವನು. ॥ ೨೩ ॥

ಶ್ರೇಷ್ಠ ಸಮಾಧಿಯೇ ಒಂದು ತಿಳಿಯಾದ ಸರೋವರ. ಅದರ ದಂಡೆಯಲ್ಲಿ ಚೆನ್ನಾಗಿ ಸ್ನಾನಮಾಡಲು ಮನಸ್ಸಿನೊಳಗಿನ ದೋಷವೆಲ್ಲವು ಕಲಕಿ ತೊಳೆದು ಹೋಗುವದು. ॥ ೨೪ ॥

ಧ್ಯಾನವೆಂಬುದು ನಿರಾಕಾರವಾದುದು. ಅದನ್ನು ಪಡೆದ ಸುಕುಮಾರನು * ಧನ್ಯನೇ ಸರಿ. ಸನ್ಯಾಸವನ್ನು ಸ್ವೀಕರಿಸಿದ ಐದುಜನ ಪಾಂಡವರೂ ಮನ್ನಣೆಗೆ ಪಾತ್ರರು. ॥ ೨೫ ॥

---

* ಜೈನರ ಪೌರಾಣಿಕ ವ್ಯಕ್ತಿ.

ಅನುಪಮ[೧] ಪರಮಾನಂದವನು
ನೆನೆದೊಡೆ ಮನದೊಳು ನಿನ್ನ
ಜನಿಸಿದ ಕರ್ಮಗಳೋಡುವವು
ಜನಿಸದು ಮುಂದಕೆ ಕರ್ಮ || ೭೬ ||

ಅರಿಯದೆ ಮನದೊಂದರ್ಥವನು
ಅರಸಿಯು ಧ್ಯಾನಿಸುವಂತೆ
ಅರಸಲು ತನ್ನನು ತನ್ನೊಳಗೆ
ನೆರೆ ಸುಖಮೊಂದಿಹದೊಂದೆ || ೭೭ ||

ಜನಿಸಿದ ರಾಗಾದಿಕಮೆಂಬೀ
ಘನಕಲ್ಲೋಲಗಳಿಂದ
ಮನವೆಂಬುದಕವು ಕದಡದಿರೆ
ಚಿನುಮಯನಲ್ಲಿಯೆ ತೋರ್ಕುಂ || ೭೮ ||

---

ಹೋಲಿಕೆಯನ್ನು ಕೊಟ್ಟು ಹೇಳಲು ಬಾರದಂತಹ ಶ್ರೇಷ್ಠ ಆನಂದವನ್ನು ಮನದಲ್ಲಿ ನೆನೆದರೆ ನಿನಗೆ ಕಟ್ಟಿದ ಕರ್ಮಗಳೆಲ್ಲ ಹೋಗುವವು. ಮುಂದೆ ಕರ್ಮವು ಹುಟ್ಟಲಾರದು. || ೭೬ ||



ಮನದೊಳಗಿರುವ ಒಂದು ಬಯಕೆಯ—ಗೂಢದ—ಅರ್ಥ ಹೊಳೆಯದೆ ತನ್ನಲ್ಲಿ ತನ್ನನ್ನೇ ಹುಡುಕುತ್ತ ಅದಕ್ಕಾಗಿ ಧ್ಯಾನಿಸುತ್ತ ಇದ್ದರೆ ಒಳ್ಳೆಯ ಸುಖವು ಪ್ರಾಪ್ತವಾಗುವದು. ಕೊನೆಗೆ ತನ್ನ ಬಯಕೆಯ ಅರ್ಥ ಹೊಳೆಯುವದು. || ೭೭ ||

ಮನಸ್ಸೆಂಬುದು ತಿಳಿನೀರ ಕೊಳವಿದ್ದಂತೆ. ಆಯಾ ಕಾಲದಲ್ಲಿ ಬರುವ ಸಿಟ್ಟು ಪ್ರೇಮ ಮೊದಲಾದವುಗಳಿಂದ ಅದು ಕಲಕಿ ಹೊಲಸಾಗದೆ ಇದ್ದರೆ ಮಾತ್ರ ಅಲ್ಲಿಯೇ ಚಿನ್ಮಯ ಮೂರ್ತಿ ಕಾಣುವನು. || ೭೮ ||

ಸುಖದುಃಖಗಳಲ್ಲಿ ಸಮಭಾವನೆಯು ಬೇಕು.

ಒಳ್ಳೆಯ ಮಾತುಗಳನ್ನಾಡಲು ಬರೆಯಲು ಆತ್ಮಜ್ಞಾನವೇ ಬೇಕೆಂತೇನಿಲ್ಲ ಭಾಷಾಪ್ರಭುತ್ವ ಆತ್ಮಜ್ಞಾನಿಗಳಿಗೆ ಸಂಬಂಧವಿಲ್ಲ. ಒಳ್ಳೇ ವಚನರಚನೆ ಮಾಡು-

---

೧ ಮುನಿಸುತ (ಅ)

ಸುಲಲಿತ ನಿರ್ಮಲ ಜಲದೊಳಗೆ
ತೊಳಗುವ ತಾರೆಗಳಂತೆ[೧]
ಇಳೆಯೊಳು ಯೋಗಿಯ ಜ್ಞಾನದೊಳು
ಪೊಳೆವುದು ಮೂಜಗವೆಲ್ಲ ॥ ೭೯ ॥

* ಶರಣೋತ್ತಮ ಶುಚಿ ಮಂಗಲವು
ವರಧರ್ಮಗಳಿವು ನಾಲ್ಕು
ಪರಿಣಮಿಸಿರ್ಪವು ಯೋಗಿಯೊಳು
ವರಸಮರಸಯುತನಲ್ಲಿ ॥ ೮೦ ॥

ನೋಡಿದೊಡಾತ್ಮನ ತೀರ್ಥವದೆ
ಕೂಡಿದೊಡಾತ್ಮದಿ ಮುಕ್ತಿ
ಪಾಡಿದಡಾಗಲೆ ಕರ್ಮತತಿ
ಓಡುವದವಗಂಜಿ ಬೆಚ್ಚಿ ॥ ೮೧ ॥

---

ಪವನೂ ಡಾಂಭಿಕನಿರಬಹುದು ಆದರಿಂದ ವಚನಶೂರತ್ವಬೇಕಿಲ್ಲ. ಆತ್ಮತೇಜವು ಬೇಕು ಇದೇ ಮಾನವತೆಯ ಅಳೆಗೋಲು.

ಒಳ್ಳೇ ಸುಂದರವಾದ ಸ್ವಚ್ಛ ನೀರೊಳಗೆ ಹೊಳೆಯುವ ಚಿಕ್ಕೆಗಳಂತೆ—ಪ್ರತಿಬಿಂಬಿಸುವ ಚಿಕ್ಕೆಗಳಂತೆ—ಭೂಮಿಯ ಮೇಲೆ ಯೋಗಿಯ ಜ್ಞಾನದಲ್ಲಿ ಮೂರು ಲೋಕಗಳೆಲ್ಲ ಹೊಳೆಯುವವು. ॥ ೭೯ ॥

ಯೋಗಿಯಲ್ಲಿ ನಾಲ್ಕು ಅಂಶಗಳು ಅರಳಿರುತ್ತವೆ: ಧರ್ಮಕ್ಕೇನೇ ಶರಣು ಹೋಗುವುದು, ಉತ್ತಮನಾಗಿರುವದು, ನಿರ್ಮಲನಾಗಿರುವದು, ಶುಭಕಾರಿಯಾಗಿರುವದು. ಇವೆಲ್ಲ ಆತ್ಮನಲ್ಲಿ ಸಮರಸನಾಗಿರುವ ಯೋಗಿಯಲ್ಲಿ ಹೊಂದಿಕೊಂಡಿರುವವು. ॥ ೮೦ ॥

ಆತ್ಮದರ್ಶನವೇ ತೀರ್ಥದರ್ಶನ. ಆತ್ಮನಲ್ಲಿ ಐಕ್ಯನಾಗಿರುವದೇ ಮುಕ್ತಿ. ಪರಮಾತ್ಮನನ್ನು ಸ್ತುತಿಸುತ್ತಿರುವಾಗಲೇ ಕರ್ಮದ ರಾಶಿಯು ಅಂಜಿಓಡುವದು. ॥ ೮೧ ॥

---

೧ ತಾವರೆ (ಬ, ಕ) * ಈ ಪದ್ಯ ಕ ಪ್ರತಿಯಲ್ಲಿ ಇಲ್ಲ.

ಕೂಡಿದ ಕರ್ಮದೊಳಾತ್ಮನನು
ನೋಡುವ ದಾರಿಯ ಕಾಣೆ
ನೋಡಲು ತನ್ನನು ತನ್ನೊಳಗೆ
ಕೇಡಿಲ್ಲಾತ್ಮನೊಳೆಂದು ‖ ೬೨ ‖

ಒಡಲಸಮಾನತೆಯಿಂದವನು
ಮಿಡುಕನು ತನ್ನೊಳ[೧]ನಿಂದ–
ಜಡನು ವ್ಯಾಪಿ ಶೂನ್ಯನೆಂದು
ನುಡಿವರು ಬುಧರುಗಳಿಂತು ‖ ೬೩ ‖

ಅನುಭೂತಿ ಸುಖದೊಳಗಿನಿತು
ಅನಿಮಿಷಪತಿಗವು, ಕೋಟಿ
ವನಿತಾರತಿ ಸುತ ವಲ್ಲಭಗೆ
ನೆನೆಯಲು ಮನದೊಳಗಿಲ್ಲ ‖ ೬೪ ‖

---

ಕರ್ಮದಿಂದ ಕೂಡಿರುತ್ತಿರುವಾಗ ಆತ್ಮನನ್ನು ಕಾಣುವ ದಾರಿಯನ್ನು ನಾನು ಕಾಣೆನು. ತನ್ನೊಳಗೆ ತನ್ನನ್ನು ನೋಡಿದರೆ ಆತ್ಮನಿಗೆ ಕೆಡಕು ಎಂದೂ ಆಗಲಾರದು. ‖ ೬೨ ‖

ಚರಮಶರೀರಿಯಾದ ಆತ್ಮನು ತನ್ನೊಳಗೆ ಎಂದೂ ದುಃಖಪಡಲಾರನು. ಆ ಸ್ಥಾನದಿಂದ (ಅದೇ ಜನ್ಮದಲ್ಲಿ ಮುಕ್ತನಾಗುವಿಕೆ) ಎಂದೂ ಕದಲಲಾರನು. ಅಂಥ ಆತ್ಮನು ಜಡನಲ್ಲ. ಮೇಲಾಗಿ ಸರ್ವವ್ಯಾಪಿಯು. ನಿರಾಕಾರನು ಎಂದು ತಿಳಿದವರು ಹೇಳುವರು. ‖ ೬೩ ‖

ಇದಕ್ಕೆಲ್ಲ ಅನುಭೂತಿ (Perception) ಬೇಕು. ಬುದ್ಧಿಯಿಂದ ವಿಭಜಿಸಿ ತಿಳಿಯುವೆನೆಂದರೆ ಆಗದು. ಈ ಅನುಭೂತಿಯಿಂದ ಸಿಗುವ ಸುಖವು ಕೋಟಿ ಇಂದ್ರರಸುಖಕ್ಕೂ ಮಿಗಿಲಾದುದು. ಇಂಥ ಸುಖವನ್ನು ಹೊಂದಲು ಸ್ತ್ರೀ, ಭೋಗ, ಮಕ್ಕಳು, ಪತಿ ಮೊದಲಾದ ಐಹಿಕ ಸುಖದಾಶೆಯನ್ನು ಬಿಡಬೇಕಾಗುವದು. ‖ ೬೪ ‖

---

೧ ಮತ್ತತ್ರಿತ್ತ. (ಬ)

ದರ್ಶನ ಜ್ಞಾನ ಚಾರಿತ್ರಗಳು
ಪರಮಾತ್ಮನೊಳವು ಮೂರು
ಸುರಚಿರ ಗುಣಗಳು ನಿಶ್ಚಯದಿಂ
ಪರಮನನಗಲಿಹವಲ್ಲ ॥ ೮೫ ॥

ಜೀವನೆ ನಿನ್ನೊಳಗಿವು ಮೂರು
ಭಾವಿಸಿ ನೋಡಿದೊಡೊಮ್ಮೆ
ಕೇವಲಿಯೇಕಾಖಂಡನೊಳು
ಆವುದು ಭೇದವು ಇಲ್ಲ ॥ ೮೬ ॥

ಒಂದೊಂದವಯವ ಕುಂದಿಸಿಯೇ
ಅಂಧಕರಾನೆಯನೆಂತು
ಛಂದದ ಭೂರಿ ಗುಣಾನ್ವಿತನ
ಮಂಥರು ಕೆಡುವರು ಕಂಡು ॥ ೮೭ ॥

---

ಸಮ್ಯಗ್ದರ್ಶನ ಜ್ಞಾನ ಚಾರಿತ್ರ್ಯಗಳು ಪರಮಾತ್ಮನಲ್ಲಿ ಕೂಡಿರುವಂಥ ಮೂರು ಒಳ್ಳೆಯ ಗುಣಗಳು. ಇವು ಪರಮಾತ್ಮನನ್ನು ಬಿಟ್ಟು ಎಂದೂ ಇರಲಾರವು. ॥ ೮೫ ॥

ಎಲೈ ಜೀವನೆ! ನಿನ್ನೊಳಗೆ ಈ ಮೂರು ರತ್ನಗಳನ್ನು ಭಾವನೆಯ ಬಲದಿಂದ ನೋಡಿಕೊಳ್ಳು. ಆಮೇಲೆ ಕೇವಲಿಗಳಿಗೂ ನಿನಗೂ ಭೇದವೇ ಇಲ್ಲ. ॥ ೮೬ ॥

ಕುರುಡರು ಆನೆಯ ಒಂದೊಂದು ಅವಯವವನ್ನು ಮುಟ್ಟಿ, ತಾವು ತಿಳಕೊಂಡದ್ದು ಆನೆಯ ಪೂರ್ಣ ಸ್ವರೂಪವೆಂದೇ ಹೇಳತೊಡಗುವರು. ಸೊಂಡಿಯನ್ನು ಮುಟ್ಟಿದವನು ಆನೆಯು ಹಾವಿನಂತೆ ಮಿದುವು ಉದ್ದ ಇರುವದೆಂದು ಹೇಳಿದರೆ ಬಾಲವನ್ನು ಮುಟ್ಟಿದವನು ಕಸಬರಿಗೆಯಂತೆ ಆನೆಯಿದೆ ಎನ್ನುವ. ಅದರಂತೆ ಕಿವಿ ಕಾಲುಗಳನ್ನು ಮುಟ್ಟಿದವರೂ ಬೇರೆ ಬೇರೆ ಅಭಿಪ್ರಾಯಗಳನ್ನೇ ಕೊಡುವರು. ಇವರಿಗೆಲ್ಲ ನಿಜವಾದ ಆನೆಯ ಜ್ಞಾನವಾಗಿರುವುದೇ? ಇಲ್ಲ. ಹಾಗೆಯೇ ಅನೇಕ ಒಳ್ಳೆಯ ಗುಣಗಳಿಂದ ಕೂಡಿದ ಪರಮಾತ್ಮನ ಬಗ್ಗೆ ಮಂದಮತಿಗಳು ಅನೇಕ ಅಪೂರ್ಣ ಕಲ್ಪನೆಗಳನ್ನು ಮಾಡಿಕೊಳ್ಳುವರು. ಅವರಿಂದ ಕೆಡುವರು, ಅನ್ಯರನ್ನು ಕೆಡಿಸುವರು. ॥ ೮೭ ॥

ಘನತರ ರೋಗದ ಪೀಡೆಗಳು
ತನುಗಹುದಾತ್ಮನಿಗಿಲ್ಲ
ಮನೆ ಬೇನುದು ಶಿಖಿಮಾಲೆಗಳಿಂ
ಅನುಪಮ ಗಗನವದಿಲ್ಲ ॥ ೮೮ ॥

ಯೋಗದಿಂ ಹರಿವವು ಕರ್ಮಗಳು
ಯೋಗದ ದೆಶೆಯಿಂ ಮುಕ್ತಿ
ಯೋಗದ ಶಕ್ತಿಯ ಬಲ್ಲವನಾ
ಯೋಗಿಯೊಳಲ್ಲದೆ ಕಾಣೆ ॥ ೮೯ ॥

ಜ್ಞಾನಿಜನಂಗಳು ಮನ್ನಿಸುವ
ಧ್ಯಾನದ ಬಲದಿಂದ
ಜ್ಞಾನವಿದೊಂದೇ ಎನಗಹುದು
ಏನನು ಕಾಣೆನು ಮತ್ತೆ ॥ ೯೦ ॥

---

ದೊಡ್ಡ ದೊಡ್ಡ ರೋಗದ ಪೀಡೆಗಳು ದೇಹಕ್ಕೆ ಆಗುವವೇ ಹೊರತು ಆತ್ಮನಿಗೆ ಅಲ್ಲ. ಬೆಂಕಿಯಿಂದ ಮನೆಯು ಸುಡುವುದೇ ಹೊರತಾಗಿ ಅಪರಲ್ಲಿಯು ಶ್ರೇಷ್ಠವೆನಿಸುವ * ಆಕಾಶ ಸುಡಲಾರದು. ಅಗ್ನಿಯು ಅದನ್ನು ಸುಡಬಲ್ಲುದೇ ? ॥ ೮೮ ॥

ಯೋಗದಿಂದ ಕರ್ಮಗಳು ನಾಶವಾಗುವವು. ಯೋಗವೇ ಮುಕ್ತಿಗೆ ಕಾರಣವು. ಇಂತಹ ಯೋಗದ ಶಕ್ತಿಯನ್ನು ಆ ಜಿನೇಶ್ವರನೊಬ್ಬನಲ್ಲಿಯೇ ಕಾಣುವೆವು. ॥ ೮೯ ॥

ಸಮ್ಯಜ್ಞಾನಿಗಳೆಲ್ಲರೂ ಒಪ್ಪಿರುವ ಧ್ಯಾನದ ಬಲದಿಂದ ನನಗೆ ಪರಮಾತ್ಮನ ಜ್ಞಾನವೊಂದೇ ಆಗುವದು. ಅದನ್ನು ಬಿಟ್ಟು ಇನ್ನೇನನ್ನೂ ನಾನು ಕಾಣೆನು. ॥೯೦॥

ಧ್ಯಾನದ ಬಲದಿಂದ ದೈಹಿಕ ಸುಖದುಃಖಗಳ ವಿಚಾರದ ಗೊಡವೆಗೆ ಹೋಗುವದಿಲ್ಲ. ಆತ್ಮಕಲ್ಯಾಣವೊಂದನ್ನೇ ಚಿಂತಿಸುವೆನೆಂಬ ಭಾವವು.

---

* ಜೈನ ಶಾಸ್ತ್ರದಲ್ಲಿ ಹೇಳಿದ ಆರು ದ್ರವ್ಯಗಳಲ್ಲಿ ಆಕಾಶವೊಂದು. ಈ ಆರು ದ್ರವ್ಯಗಳಲ್ಲಿ ಜೀವ ಮತ್ತು ಪುದ್ಗಲ ಇವೆರಡೂ ಪರಿಣಾಮವನ್ನು ಹೊಂದುವಂತಹ ದ್ರವ್ಯಗಳು, ಜೀವವು ಒಂದೇ ಸಚೇತನ ದ್ರವ್ಯವು; ಉಳಿದ ದ್ರವ್ಯಗಳು ಅಚೇತನವಾಗಿವೆ. ಪುದ್ಗಲವು ಮೂರ್ತವಾಗಿದೆ. ಉಳಿದವು ಅಮೂರ್ತವಾಗಿವೆ. ಜೀವ, ಪುದ್ಗಲ, ಧರ್ಮ ಅಧರ್ಮ, ಮತ್ತು ಆಕಾಶ ಇವು ಪ್ರದೇಶವುಳ್ಳವು. ಅದರಲ್ಲೂ ಧರ್ಮ ಅಧರ್ಮ

ಕೆಡದಿರು ಕೆಡದಿರು ಜೀವವೆ ನೀನು
ಒಡಲೊಳು ಜಡಮತಿಯಾಗಿ
ಮಡಗದಿರಂತಃಕರಣವನು
ಪಡೆದಮಲಾತ್ಮವನೇ ಬಿಟ್ಟು ॥ ೯೧ ॥

ಭಾವಿಸು ನಿನ್ನನು ನಿನ್ನೊಳಗೆ
ಜೀವದಯಾಪರನಾಗಿ
ಕೇವಲ ದರ್ಶನ ಜ್ಞಾನಗಳು
ಭಾವನೆ ಇಲ್ಲದೊಡಿಲ್ಲ ॥ ೯೨ ॥

ಸಾಕಿನ್ನು ರಚನೆಯ ವಚನಗಳವ-
ಲೋಕಿಸುದೀಪ್ತಿಯ ನೀನು
ಲೌಕಿಕ ವಚನ ವಿಕಲ್ಪಗಳು
ಶೋಕದೊಳಡಗುವವೆಲ್ಲ ॥ ೯೩ ॥

---

ಎಲೈ ಜೀವನೆ! ನೀನು ಮಂದಮತಿಯಾಗಿ ದೇಹದಲ್ಲಿಯೇ ಅಂತಃಕರಣವನ್ನಿಟ್ಟು ಶ್ರೇಷ್ಠವಾದ ಆತ್ಮವನ್ನು ಮರೆಯಬೇಡ. ಮರೆತರೆ ಕೆಡುವಿ. ಕೆಡಬೇಡ. ॥ ೯೧ ॥

ಪ್ರತಿಯೊಂದು ಜೀವಿಯ ಮೇಲೂ ದಯೆಯುಳ್ಳವನಾಗಿ ನಿನ್ನೊಳಗೆ ನಿನ್ನನ್ನು ತಿಳಿದುನೋಡು. ಶುದ್ಧವಾದ ದರ್ಶನಜ್ಞಾನಗಳು ಭಾವಶುದ್ಧಿಯಿಲ್ಲದೆ ದೊರೆಯಲಾರವು. ॥ ೯೨ ॥

ಇನ್ನು ವಚನ ರಚನೆಯ ಚತುರತೆಯೆಲ್ಲ ಸಾಕು. ನಿನ್ನಲ್ಲಿ ಇರುವಂತಹ ಆತ್ಮ ಪ್ರಕಾಶವನ್ನು ನಿರೀಕ್ಷಿಸು. ಈ ಲೌಕಿಕ ವಚನಗಳು ಕೊನೆಗೆ ದುಃಖದಲ್ಲಿಯೇ ಮುಳುಗಿಸಿ ಹೋಗುವವು. ॥ ೯೩ ॥

ಡಂಭಾಚಾರದ ಮಾತುಗಳೆಲ್ಲ ಸಂಕಟ ಬಂದಕಾಲಕ್ಕೆ ಉಳಿಯಲಾರವು. ಆತ ಪ್ರಭೆಯೊಂದೇ ಕೊನೆಯ ವರೆಗೂ ಬಾಳುವಂತಹದು.

---

ಆಕಾಶಗಳು ಏಕಸಂಖ್ಯಾತ್ಮಕ ಅನಂತ ಪ್ರದೇಶವುಳ್ಳವು. ಜೀವ ಪುದ್ಗಲಗಳಿಗೆ ಕ್ರಿಡಿಯೆಯು ಉಂಟು. ಧರ್ಮ ಅಧರ್ಮ ಆಕಾಶ ಕಾಲಗಳು ನಿತ್ಯವಾದವುಗಳು; ಇವು

[೧] ಭುವನತ್ರಯದಲ್ಲಿ [ಬ]

ಬೆಳಗಿದ ದರ್ಪಣದೊಳಗೆಂತು
ಪೊಳೆವುದು ತನ್ನಯ ರೂಪು
ಸುಲಲಿತ ಜಿನಪದನಖದೊಳಗೆ
ಪೊಳೆವುದು ಮೂಜಗವೆಲ್ಲ || ೯೪ ||

ಸೋಮದಿವಾಕರ ಕೋಟಿಗಳ
ಧಾಮುವ ವಿಮುಖವಮಾಡಿ
ಪ್ರೇಮದಿ ಮೆರೆವ ಜೀನೆಶ್ವರನ
ನಾಮಸ್ಮರಣೆಯ ಮಾಡು || ೯೫ ||

ಅನುಪಮ ಮಂಗಲ ಗುಣನಿಧಿಯ
ಮನದೊಳು ಭಾವಿಸಿ ಮೆಚ್ಚಿ
ಜನನುತ ಮಂಗಳ ವಸ್ತುಗಳಿಂ
ನೆನೆದರ್ಚನೆಯನು ಮಾಡು || ೯೬ ||

---

ಸ್ವಚ್ಛವಾಗಿ ತೊಳೆದ ಕನ್ನಡಿಯಲ್ಲಿ ಯಾವ ಪ್ರಕಾರ ತನ್ನ ರೂಪು ಹೊಳೆಯುವದೋ ಅದೇಪ್ರಕಾರ ಸುಂದರವಾದ ಜಿನೇಶ್ವರರ ಪಾದಗಳ ಉಗುರುಗಳಲ್ಲಿ ಮೂರು ಲೋಕವೆಲ್ಲ ಹೊಳೆಯುವದು. || ೯೪ ||

ಜಿನೇಶ್ವರರ ಪಾದಗಳ ಉಗುರುಗಳಲ್ಲಿ ಮೂಲೋಕ ಹೊಳೆಯುವದೆಂದರೆ ಅವರು ಮೂರು ಲೋಕದ ಅಗ್ರಭಾಗದಲ್ಲಿ ನೆಲೆಸಿರುವರೆಂದು ಅರ್ಥ.

ಕೋಟಿ ಚಂದ್ರಸೂರ್ಯರ ಪ್ರಭೆಯನ್ನು ಮೀರಿಸಿ ಮೆರೆಯುವ, ಸಕಲ ಪ್ರಾಣಿಗಳಲ್ಲಿ ಸಮಭಾವವುಳ್ಳ, ಜಿನೇಶ್ವರರ ನಾಮಸ್ಮರಣೆಯನ್ನು ಮಾಡು. || ೯೫ ||

ಉಪಮಾತೀತನಾದಂಥ, ಒಳ್ಳೆಯ ಗುಣಗಳ ಸಮುದ್ರವೇ ಆಗಿರುವಂತಹ ಅರಹಂತನನ್ನು ಮನಸ್ಸಿನಲ್ಲಿ ಭಾವಿಸು, ಮೆಚ್ಚು; ನೆನೆ. ಆ ಮೇಲೆ ಒಳ್ಳೆಯ ವಸ್ತುಗಳಿಂದ ಪೂಜಿಸು. || ೯೬ ||

---

ಗಳಿಗೆ ವಿಭಾವರೂಪ ವ್ಯಂಜನಪರ್ಯಾಯಗಳು ಇಲ್ಲ. ಜೀವವು ಕರ್ತೃವಾಗಿದೆ. ಆಕಾಶವು ಲೋಕಾಲೋಕಗಳನ್ನು ವ್ಯಾಪಿಸಿದೆ

ಜಲಗಂಧಾಕ್ಷತೆ ಕುಸುಮಗಳಿಂ
ಸಲೆ ನೈವೇದ್ಯಗಳಿಂದ
ತೊಳಗುವ ದೀಪ ಸುಧೂಪಗಳಿಂ
ಫಲದಿಂದರ್ಘ್ಯಗಳಿಂದ ॥ ೯೭ ॥

ದೇವನರೋರಗ ವಂದಿತನ
ಕೇವಲಜ್ಞಾನ ಸುಧಾಬ್ಧಿ
ಪ್ಲಾವಿತಮೂರ್ತಿ ಪದಯುಗವ
ಭಾವಿಸು ಪೂಜಿಸು ನಿಚ್ಚಂ ॥ ೯೮ ॥

ಜಯಜಯ ಕಾರುಣ್ಯಾಂಬುಧಿಯೆ
ಜಯಜಯ ಮಂಗಲಮೂರ್ತಿ
ಜಯಜಯ ಪಾವನ ಗುಣನಿಧಿಯೆ
ಜಯಜಯ ದೇವ ನಮೋಸ್ತು ॥ ೯೯ ॥

---

ನೀರು, ಗಂಧ, ಅಕ್ಷತೆ, ಹೂವು, ಒಳ್ಳೆಯ ನೈವೇದ್ಯಗಳಿಂದಲೂ ಹೊಳೆಯುವ ದೀಪಧೂಪಗಳಿಂದಲೂ ಫಲ ಅರ್ಘ್ಯಗಳಿಂದಲೂ ಪೂಜಿಸು. ॥ ೯೭ ॥

ಅರಹಂತನು ದೇವ, ಮನುಷ್ಯ, ನಾಗರೇ ಮೊದಲಾದವರಿಂದ ವಂದಿಸಿಕೊಳ್ಳುವವನು. ಕೇವಲ ಜ್ಞಾನವೆಂಬ ಅಮೃತದ ಸಮುದ್ರನು. ಸಂಸಾರ ಸಾಗರದಲ್ಲಿ ಜೀವ ಈಸಿ ಪಾರಾಗಬೇಕಾದರೆ ಕೈಯ ಆಧಾರಕೊಟ್ಟು—ಮುಳುಗದಂತೆ ನೋಡಿಕೊಂಡು—ದಂಡೆಗೆ ಒಯ್ಯುವನು. ಆದುದರಿಂದ ಅರಹಂತನ ಪಾದಗಳನು ಯಾವಾಗಲೂ ಪೂಜಿಸುತ್ತಿರು. ॥ ೯೮ ॥

ಜಯ ಜಯ ದಯಾಸಮುದ್ರನೆ! ಜಯ ಜಯ ಮಂಗಲಮೂರ್ತಿಯೆ! ಜಯಜಯ ಪವಿತ್ರ ಗುಣಗಳ ರಾಶಿಯೇ! ಜಯಜಯ ದೇವನೆ ನಮಸ್ಕರಿಸುವೆ. ॥ ೯೯ ॥

---

ಕೇವಲ ಜ್ಞಾನಾವಸ್ಥೆಯೆಂದರೆ ತೀರ್ಥಂಕರರು ಜೀವನ್ಮುಕ್ತಾವಸ್ಥೆ. ಆಗ ಅವರಿಗೆ ಇಹದಲ್ಲಿ ಧರ್ಮಬೋಧನೆಯ ಹೊರತಾಗಿ ಬೇರೆ ಕಾರ್ಯವೇ ಉಳಿಯುವದಿಲ್ಲ.

ಕಾಲಾತೀತನೆ ನಿರ್ಮಲನೆ
ತ್ರೈಲೋಕ್ಯೋಜ್ವಲವಾಣಿ
ಕೇವಲನಿಲಯನೆ ನಿರ್ಭಯನೆ
ಭಾವಿಸು ಭವ್ಯರನೊಲಿದು ||೧೦೦||

ಅನ್ನವು ಶಾಸ್ತ್ರವು ಭೈಷಜವು
ಮನ್ನಿಸಿ ಕೊಡುವುದು ಮತ್ತೆ
ಚನ್ನಾಗಭಯವ ಮಾಡುವದು
ಇನ್ನಾಗಲಿ ಜಗಕೆಲ್ಲ ||೧೦೧||

ಕಾವ್ಯರಸಾಮೃತ ಧಾರೆಗಳಿಂ
ದಿವ್ಯ ಸುಖಾಂಬುಧಿಯಲ್ಲಿ
ಭವ್ಯರು ತಣ್ಣನೆ ತಣಿದಿರಲಿ
ಸೇವ್ಯರು ಬುಧರುಗಳಿಂದ || ೧೦೨||

---

ಅರಹಂತದೇವನೆ, ನೀನು ಕಾಲವನ್ನು ಮೀರಿನಿಂತವನು, ದೋಷರಹಿತನು. ಮೂರು ಲೋಕಗಳನ್ನೆಲ್ಲ ಬೆಳಗುವಂತಹ ದಿವ್ಯ ಮಾತುಗಳುಳ್ಳಂಥವನು. ಕೇವಲ ಜ್ಞಾನಕ್ಕೆ ತವರುಮನೆಯನಿಸಿಕೊಂಡವನು. ನಿರ್ಭೀತಿಯುಳ್ಳವನು. ಭವ್ಯರಿಗೆ ಒಲಿದು ರಕ್ಷಿಸು. || ೧೦೦ ||

ಅನ್ನ, ಶಾಸ್ತ್ರ, ಔಷಧ, ಅಭಯಗಳನ್ನು ಮರ್ಯಾದೆಯೊಡನೆ ದಾನ ಕೊಡುವುದು. ಇದು ಇನ್ನು ಮೇಲೆ ಜಗದಲ್ಲಿ ಎಲ್ಲ ಕಡೆಗೂ ಹಬ್ಬಲಿ. || ೧೦೧ ||

ಕಾವ್ಯರಸವೆಂಬ ಅಮೃತಧಾರೆಗಳಿಂದ ಶ್ರೇಷ್ಠವಾದ ಸುಖದ ಸಾಗರದಲ್ಲಿ ಭವ್ಯರು ಶಾಂತರಾಗಿದ್ದು, ತೃಪ್ತರಾಗಲಿ. ಇದಕ್ಕೆ ಕಾವ್ಯರಸವನ್ನು ಮೊದಲು ಸೇವಿಸಿದವರೂ ಜಾಣರೂ ನೆರವಾಗಲಿ. || ೧೦೨ ||

---

೧ ತ್ರೈಲೋಕ್ಯಾಮಲ [ಬ]

ಮನ್ಮಥ ಸುಖ ಹರ ಸೌಖ್ಯವನು
ಜನರಿಗೆ ಕೊಡುವದರಿಂದ
ಚಿನ್ಮಯ ಚಿಂತಾಮಣಿಯೆಂದು
ಸನ್ಮುನಿ ನಾಮವನಿಟ್ಟ ॥ ೧೦೩ ॥

ಇಲ್ಲಿ ಕಾವ್ಯವನೋದುವರು
ಎಲ್ಲರು ಹರಿಕೃತ ಪಂಚ-
ಕಲ್ಯಾಣ ಕೀರ್ತಿತ ಶಿವಸುಖದ
ವಲ್ಲಭರಾಗಲಿ ಬೇಗ ॥ ೧೦೪ ॥

ಸುರನರ ಸಭೆಯೊಳಗನವರತ
ಪರಮಾನಂದವನಿತ್ತು
ಹರಿತಾರಂಬರವಿರುತಿರಲು
ವರಬುಧರವರೋದುವರಾಗಿ ॥ ೧೦೫ ॥

ಪ್ರಣಿಹಿತ ಚಿನ್ಮಯ ಚಿಂತಾ-
ಮಣಿಯಿದು ಕಲ್ಯಾಣಕೀರ್ತಿ ಸೌಖ್ಯಾಸ್ಪದಮಂ
ಮಣಿಯದೆ ನೆಲಸಲಿ ಜಗದೊಳು
ಗುಣಿ ಜನಗಳಿಗಿತ್ತು ತಾರು (?) ಮುಕ್ತಿಶ್ರೀಯಂ ॥

---

ಈ ಗ್ರಂಥವು ಶಿವಸುಖವನ್ನು ಕೊಡುವದರಿಂದ ಕಲ್ಯಾಣ ಕೀರ್ತಿ ಮುನಿಗಳು ಇದಕ್ಕೆ ಚಿನ್ಮಯ ಚಿಂತಾಮಣಿ ಎಂದು ಹೆಸರಿಟ್ಟರು. ॥ ೧೦೩ ॥

ಇಲ್ಲಿ ಈ ಕಾವ್ಯವನ್ನು ಓದುವವರು ಕಲ್ಯಾಣಕೀರ್ತಿ ಆಚಾರ್ಯರುಹೇಳಿರುವ ಶಿವಸುಖದಒಡೆಯರಾಗಲಿ, ಪಂಚಕಲ್ಯಾಣಗಳನ್ನು ಪಡೆಯುವಂಥವರಾಗಲಿ.।೧೦೪।

ಈ ಚಿನ್ಮಯಚಿಂತಾಮಣಿಯು ದೇವಮನುಷ್ಯರ ಸಭೆಗಳಲ್ಲೆಲ್ಲ ಯಾವಾಗಲೂ ಪರಮಾನಂದವನ್ನು ಕೊಡುತ್ತ, ಸೂರ್ಯ ಚುಕ್ಕೆ ಆಕಾಶಗಳು ಇರುವರೆಗೆ ಜಾಣರು ಓದುವಂತಾಗಿ ಇರಲಿ. ॥ ೧೦೫ ॥

ವಿಚಾರಗಳನ್ನು ಕೇಂದ್ರೀಕರಿಸಿ ಕಲ್ಯಾಣಕೀರ್ತಿ ಆಚಾರ್ಯರಿಂದಬರೆಯಲ್ಪಟ್ಟ ಈ ಚಿನ್ಮಯ ಚಿಂತಾಮಣಿಯು ಲೋಕದಲ್ಲಿ ಮಣಿಯದೆ ನೆಲೆಸಲಿ. ಒಳ್ಳೆಯ ಗುಣಗಳಿಂದ ಭೂಷಿತರಾದವರಿಗೆ ಮುಕ್ತಿಶ್ರೀಯನ್ನು ಕೊಡಲಿ. ಸುಖಕ್ಕೆ ಆಸ್ಪದವಾಗಿರಲಿ.

**ಹಳಗನ್ನಡ ಕಾವ್ಯಮಾಲೆಗೆ**

# ಹಿರಿಯರ ಹರಕೆಗಳು

ಅಭಿನವ ಸಮಂತ ಭದ್ರ ಶ್ರೀ ೧೦೮ ಪಾಯಸಾಗರ ಮಹಾಮುನಿಗಳವರ ಅಮರ ವಾಣಿಯಿಂದ

........ನೀವು ಕೈಕೊಂಡ ಕಾರ್ಯ ಸ್ತುತ್ಯವಾದುದು........

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ (ಮೂರುಸಾವಿರ ಮಠ, ಹುಬ್ಬಳ್ಳಿ) ಮಹಾಸ್ವಾಮಿಗಳವರ ದಿವ್ಯ ಸನ್ನಿಧಿಯಿಂದ:—

........ಹಳಗನ್ನಡ ಕಾವ್ಯಮಾಲೆಯನ್ನು ಸ್ಥಾಪಿಸಿ ಸೇಡಬಾಳದ 'ಶಾಂತಿ ಸೇವಾ ಸದನ' ದವರು ಕನ್ನಡಿಗರೆಲ್ಲರ ಅಭಿನಂದನೆಗೆ ಪಾತ್ರರಾಗಿದ್ದಾರೆ. ಏಕೀಕೃತ ಕರ್ನಾಟಕಕ್ಕೆ ಇಂಥ ಸಂಸ್ಥೆಗಳ ಆವಶ್ಯಕತೆ ತುಂಬ ಇದೆ.........

ತಪೋಮೂರ್ತಿ ಶ್ರೀ ೧೦೮ ಅನಂತಕೀರ್ತಿ ಮುನಿಗಳ ಪವಿತ್ರ ಆಶೀರ್ವಚನಗಳಿಂದ:—

........ಹಳಗನ್ನಡ ಕಾವ್ಯಗಳನ್ನು ಕವಿಚರಿತ್ರೆ-ಮುನ್ನುಡಿಗಳ ಸಹಿತ ಸಂಪಾದಿಸಿ ಪ್ರಕಟಿಸುವದು ಪವಿತ್ರ ಕಾರ್ಯ.....

ಶ್ರೀ ಗುರುಸಿದ್ಧ ಪ್ರಭುದೇವರು, ನವಕಲ್ಯಾಣಮಠ( ಧಾರವಾಡ )ದ ಶ್ರೀ ಕುಮಾರ ಸ್ವಾಮಿಗಳವರ ವರದ ಹಸ್ತದಿಂದ:—

........ನಿಮ್ಮ ಸಾಹಿತ್ಯಸೇವೆಯು ಸ್ತುತ್ಯವಾಗಿರುವದು....ಕನ್ನಡ ನಾಡಿನ ಏಕೀಕರಣ, ಕರ್ನಾಟಕ ವಿಶ್ವವಿದ್ಯಾಲಯ, ಇವುಗಳ ಬಗೆಗೆ ಉಂಟಾಗಿದ್ದ ನಾಡಿನ ಜನಗಳ ಅಭಿಮಾನ ಆಸಕ್ತಿಗಳಿಗೆ ನಮ್ಮ ಹಳೆಯ ಗ್ರಂಥಗಳಲ್ಲಿ ಮೂಡಿ ಬಂದಿದ್ದ ಕನ್ನಡತನದ ಅರಿವು ಬೆರೆತು ಅವು ಬೆಳೆದು ಬಾಳಬೇಕಾಗಿದೆ.........

ಸ್ವಸ್ತಿ ಶ್ರೀ ಲಕ್ಷ್ಮಿಸೇನ ಭಟ್ಟಾರಕ ಪಟ್ಟಾಚಾರ್ಯ ಮಹಾಸ್ವಾಮಿಗಳವರಿಂದ:—

........ಹಳಗನ್ನಡ ಕಾವ್ಯಮಾಲೆಯನ್ನು ಕಟ್ಟುವ ಕೆಲಸವು ಸ್ತುತ್ಯವಾದುದು. ಈ ಶುಭಕಾರ್ಯವು ಅಭಿವೃದ್ಧಿಯನ್ನು ಹೊಂದಲೆಂದು ಆಶೀರ್ವದಿಸುವೆ.........

ಶ್ರೀ ಆಲೂರ ವೆಂಕಟರಾಯರು

........ಕನ್ನಡ ನಾಡಿನ ಮೂಲೆ ಮೂಲೆಗಳಲ್ಲಿ ಹುಳ
ಲಿದ್ದ ಹಳಗನ್ನಡ ಗ್ರಂಥಗಳನ್ನು ಪ್ರಕಟಿಸುವ ಸ
ಕೆಲಸಕ್ಕೆ ಕೈಯಿಕ್ಕಿದ 'ಶಾಂತಿ ಸೇವಾ ಸದನ'ದ
ಅಭಿನಂದನೀಯ............

ಅನೇಕ ಗ್ರಂಥಗಳನ್ನು ಸಂಪಾದಿಸಿ ಕನ್ನಡಕ್ಕೆ ಅಪೂರ್ವ ಕಾಣಿಕೆ
ಸಲ್ಲಿಸಿದ ಶ್ರೀ. ಶಿ. ಶಿ. ಬಸವನಾಳರಿಂದ:—

....ಹಳಗನ್ನಡ ಕಾವ್ಯಮಾಲೆಯ ಉದ್ದೇಶವು ಸ್ತುತ್ಯ
ಹಳೆಯದನ್ನು ತೆಗೆದುಕೊಂಡು ನಮಗೆ ಈಗೇನು
ಬೇಕಾಗಿದೆ? ಎನ್ನಬಹುದು. ಆದರೆ.......ಹಿಂದಣ
ದಲ್ಲಿ ಅಭಿಮಾನವಿಲ್ಲದವರಿಗೆ ಈಗಿನದರಲ್ಲಿಯೂ ನಿ
ನಂಬುಗೆ ಉಂಟಾಗಲಾರದು....

ಶ್ರೀಮಾನ್ ಮೈಸೂರು ಮಹಾರಾಜರ ಆಸ್ಥಾನ ವಿದ್ವಾನ್,
ರತ್ನಂ ಎ. ಶಾಂತಿರಾಜಶಾಸ್ತ್ರಿ ಅವರಿಂದ:—

....ತಮ್ಮಗಳ ಉದ್ಯಮವು ಪ್ರಶಂಸನೀಯವಾದುದು.
ಮಾಲೆಯ ಪ್ರಥಮ ಕುಸುಮವು ಶೀಘ್ರದಲ್ಲಿ ಕನ್ನಡಾ
ಮುಡಿಗೇರಲಿ. ...

---

## ಹಳೆಗನ್ನಡ ಕಾವ್ಯಮಾಲೆಯಲ್ಲಿ
## ಅರಳಲಿರುವ ಕುಸುಮಗಳು

---

ಶ್ರೀ ಮಿರ್ಜಿ ಅಣ್ಣಾರಾಯರು ಸಂಪಾದಿಸಿದ

ಹರಿವಂಶ ಪುರಾಣ

ಭರತೇಶ ವೈಭವದ ಶೋಭನ ಸಂಧಿಗಳು ರತ್ನಾಕರವರ್ಣಿ

ರತ್ನಾಕರನ ಶೃಂಗಾರರಸ
(ಭರತೇಶ ವೈಭವದ ಶೃಂಗಾರ ಪದಗಳ ಸಂಗ್ರಹ)

### ಬಿಡಿ ಕುಸುಮಗಳು

ಸಮಂತಭದ್ರನ ಸಮಾಜಶಾಸ್ತ್ರ
(೨ನೆಯ ಶತಮಾನದ ಭಾರತೀಯ ಸಮಾಜಸಂಸ್ಕೃತಿ ದರ್ಶನ)

ಸೃಷ್ಟಿಯಲ್ಲಿ ಶಿವಾನುಭವ
(ಷಡಕ್ಷರಿಯ ಕಾವ್ಯವಿಮರ್ಶೆ)

ಜೀವನದಲ್ಲಿ ದರ್ಶನೋದಯ
(ಶ್ರೀ ಭಗವದ್ಗೀತೆಯಿಂದ)

ಮುಖ್ಯ ಮಾರಾಟಗಾರರು :

**ಶ್ರೀ ಅಣ್ಣಾ ಬಾಬಾಜಿ ಗಣೆ, ಸೇಡಬಾಳ.**

## ಪುಸ್ತಕ ದೊರೆಯುವ ಸ್ಥಳಗಳು

ವಿವೇಕಾಭ್ಯುದಯ ಕಾರ್ಯಾಲಯ, ಮಂಗಳೂರು.
ಜೀವನ ಪುಸ್ತಕಾಲಯ, ಧಾರವಾಡ.
ಶಾಂತಿ ಸೇವಾಸದನ, ಸೇಡಬಾಳ.